# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ



೨೦೦೭-೨೦೦೮ ನೇ ಸಾಲಿನ ಎಂ.ಫಿಲ್ ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

ವಿಷಯ : "ಮೈಸೂರು ನಗರದ ಆಧುನಿಕ ವಚನಕಾರ್ತಿಯರು' : 'ಒಂದು ವಿವೇಚನೆ"

ಮಾರ್ಗದರ್ಶಕರು
**ಡಾ. ಎಸ್.ಡಿ. ಶಶಿಕಲಾ**
ಅಧ್ಯಾಪಕಿ, ಕನ್ನಡ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು

ನಿಬಂಧಕಾರರು
ಕ್ರಮ ಸಂಖ್ಯೆ - ೦೮
ಶ್ರೀ ತಿಪ್ಪೇಸ್ವಾಮಿ ಎಂ.ಬಿ.
೨೦೦೭-೨೦೦೮ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ



ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ
ಮೈಸೂರು

# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ



೨೦೦೭-೨೦೦೮ ನೇ ಸಾಲಿನ ಎಂ.ಫಿಲ್ ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

**ವಿಷಯ : "ಮೈಸೂರು ನಗರದ ಆಧುನಿಕ ವಚನಕಾರ್ತಿಯರು' : 'ಒಂದು ವಿವೇಚನೆ"**


ಮಾರ್ಗದರ್ಶಕರು
**ಡಾ. ಎಸ್.ಡಿ. ಶಶಿಕಲಾ**
ಅಧ್ಯಾಪಕಿ, ಕನ್ನಡ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು

ನಿಬಂಧಕಾರರು
ಕ್ರಮ ಸಂಖ್ಯೆ - ೦೮
ಶ್ರೀ ತಿಪ್ಪೇಸ್ವಾಮಿ ಎಂ.ಬಿ.
೨೦೦೭-೨೦೦೮ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ



**ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
ಜಯಲಕ್ಷ್ಮೀಪುರಂ
ಮೈಸೂರು

# ದೃಢೀಕರಣ ಪತ್ರ

೨೦೦೭ -೨೦೦೮ನೇ ಸಾಲಿನ ಕ್ರಮ ಸಂಖ್ಯೆ...........೦೮ ರ ಶ್ರೀ ತಿಪ್ಪೇಸ್ವಾಮಿ ಎಂ.ಬಿ. ಎಂಬ ಎಂ.ಫಿಲ್ ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ "ಮೈಸೂರು ನಗರದ ಆಧುನಿಕ ವಚನಕಾರ್ತಿಯರು"; ಒಂದು ವಿವೇಚನೆ : ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ.

ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ಮೈಸೂರು.

ದಿನಾಂಕ: 20.06.2008.

ಸಹಿ [signature] 20/06/08

ಡಾ. ಎಸ್. ಡಿ. ಶಶಿಕಲಾ
ಕನ್ನಡ ಅಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು

ಡಾ. ಎಸ್.ಡಿ. ಶಶಿಕಲಾ
ಅಧ್ಯಾಪಕಿ, ಕನ್ನಡ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು - ೫೭೦ ೦೦೬

# ಪ್ರಮಾಣ ಪತ್ರ

"ಮೈಸೂರು ನಗರದ ಆಧುನಿಕ ವಚನಕಾರ್ತಿಯರು" ಒಂದು ವಿವೇಚನೆ ಎಂಬ ವಿಷಯದ ಸಂಶೋಧನಾ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ - ೦೮ರ ವಿದ್ಯಾರ್ಥಿಯಾದ ನಾನು ೨೦೦೭-೨೦೦೮ ನೇ ಸಾಲಿನ ಪರೀಕ್ಷೆಗಾಗಿ ಡಾ. ಎಸ್.ಡಿ. ಶಶಿಕಲಾ, ಕನ್ನಡ ಅಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಯಾವುದೇ ಬಗೆಯ ಪದವಿ, ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವ ವಿಶ್ವವಿದ್ಯಾಲಕ್ಕೂ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ನಾನು ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು.

ದಿನಾಂಕ: 20.06.2008.

Thippeswamy. M.B
20/06/2008
ಸಹಿ

ಶ್ರೀ ತಿಪ್ಪೇಸ್ವಾಮಿ ಎಂ.ಬಿ.
೨೦೦೭-೨೦೦೮ ನೇ ಸಾಲಿನ
ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪರಿವಿಡಿ

ಪುಟ ಸಂಖ್ಯೆ

## ಮೈಸೂರು ನಗರದ ಆಧುನಿಕ ವಚನಕಾರ್ತಿಯರು : ಒಂದು ವಿವೇಚನೆ


೧ ಪ್ರಸ್ತಾವನೆ ೧–೩

೨ ಅಧ್ಯಯನದ ಉದ್ದೇಶ ೩–೫

೩. ಅಧ್ಯಯನದ ವ್ಯಾಪ್ತಿ ೫–೬

೪ ಆಧುನಿಕ ವಚನಕಾರ್ತಿಯರ ಪರಿಚಯ ೭–೧೪

೫ ವಚನಗಳ ವಿಶಿಷ್ಟತೆ ೧೫–೭೫

೬ ಹನ್ನೆರಡನೇ ಶತಮಾನದ ವಚನಕಾರ್ತಿಯರ ಚಿಂತನೆ ೭೬–೮೧

೭ ಉಪಸಂಹಾರ ೮೨–೮೪

ಅನುಬಂಧ

೧. ಭಾವಚಿತ್ರಗಳು ೮೫–೯೦

೨. ಆಕರಗ್ರಂಥಗಳು ೯೧–೯೨

೩. ಗ್ರಂಥಋಣ ೯೩




*****

## ೧. ಪ್ರಸ್ತಾವನೆ:

ಹನ್ನೆರಡನೇ ಶತಮಾನದ ವಚನ ಸಾಹಿತ್ಯದ ದಟ್ಟವಾದ ಪ್ರಭಾವ ಮತ್ತು ಪ್ರೇರಣೆ ಆಧುನಿಕ ಇಪ್ಪತ್ತು-ಇಪ್ಪತ್ತೊಂದನೆಯ ಶತಮಾನದಲ್ಲಿಯೂ ನಿರಂತರವಾಗಿ ಮುಂದುವರಿದಿದೆ. ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು ಆರಂಭಿಸಿದ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ವೈಚಾರಿಕ ಹಾಗೂ ಸಾಂಸ್ಕೃತಿಕ ಚಳವಳಿಯ ರೂಪದಲ್ಲಿಯೇ ಆಧುನಿಕ ವಚನಕಾರ್ತಿಯರು ತಮ್ಮದೇ ಆದ ರೂಪುರೇಷೆಗಳೊಂದಿಗೆ ಕೆಲವು ವೈರುದ್ಯಗಳೊಂದಿಗೆ ಸ್ವತಂತ್ರ್ಯವಾದ ರೀತಿಯಲ್ಲಿ ಚಳವಳಿಗಳನ್ನು ವೈಚಾರಿಕತೆಯ ಪ್ರತಿಭಟನೆಯನ್ನು ಆಧುನಿಕ ಜಗತ್ತಿಗೆ ತಕ್ಕಂತೆ ಪ್ರಸ್ತುತ ಸಮಯ ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ಉತ್ತಮವಾದ ಶ್ರೇಷ್ಠವಾದ ವಚನಸಾಹಿತ್ಯ ರಚನೆ ಮಾಡಿದ್ದಾರೆ. ಹನ್ನೆರಡನೇ ಶತಮಾನದ ಬಸವಣ್ಣನವರಂತೆಯೇ ಆಧುನಿಕ ವಚನಕಾರ್ತಿಯರು ಸಹ ಸರ್ವೋದಯ ಶಾಂತಿ, ಸುಖೀರಾಜ್ಯದ ಸ್ಥಾಪನೆಗಾಗಿ ಹಂಬಲಿಸಿದ್ದಾರೆ.

ಎಲ್ಲ ಬಗೆಯ ಶೋಷಣೆಗಳಿಂದ ಮುಕ್ತವಾದ ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು ಎಂಬ ಆದರ್ಶಗಳನ್ನಿಟ್ಟುಕೊಂಡು ವಚನಸಾಹಿತ್ಯ ರಚನೆ ಮಾಡಿದ್ದಾರೆ. ಅನಾದಿಕಾಲದಿಂದಲೂ ಭಾರತೀಯ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಗೊಡ್ಡು ಸಂಪ್ರದಾಯಗಳು ಅಜ್ಞಾನ, ಅಂಧಕಾರ, ಮೂಢನಂಬಿಕೆಗಳನ್ನು ಸಮಾಜದಿಂದ ದೂರಮಾಡಿ ಮಾನವ ಜನಾಂಗವನ್ನು ಉದ್ಧಾರ ಮಾಡುವ ಮಹತ್ವಾಕಾಂಕ್ಷೆಯನ್ನು ಹೊಂದದವರಾಗಿದ್ದಾರೆ. ಬಸವಣ್ಣನವರು ಹನ್ನೆರಡನೇ ಶತಮಾನದಲ್ಲಿ ಚಲನಶೀಲತೆಯನ್ನು ಕಳೆದುಕೊಂಡಿದ್ದ ಸಮಾಜ, ಮನುಷ್ಯಜೀವನದ ನಿರರ್ಥಕಬಾಳು ಸ್ತ್ರೀಯರ ಕೆಳವರ್ಗದವರ ಹೀನಾಯ ಸ್ಥಿತಿ, ಸ್ತ್ರೀಲೋಕದ ಅನಂತ ಕಷ್ಟ ಕೋಟಲೆಗಳು, ಬಡವರು ಹಿಂದುಳಿದ ವರ್ಗದವರು, ಅನಾಥರು, ಅಸಹಾಯಕರು, ಜೀತದಾಳುಗಳನ್ನು ಕಡೆಗಣಿಸಿದ್ದ ಪರಿಸ್ಥಿತಿಯನ್ನು ಗಮನಿಸಿದ್ದರು. ಅಂತಹ ರೋಗಗ್ರಸ್ಥ ಸಮಾಜಕ್ಕೆ ಧನ್ವಂತರಿಯಾದರು. ಆ ಮೂಲಕ ಸಮಾಜದ ವೈದ್ಯರಾದರು. ಹೊಸ ಸಮಾಜಕ್ಕೆ ಬೇಕಾದ ಅಗತ್ಯ ವಿಚಾರಗಳೆಂಬ ಔಷಧೋಪಚಾರಗಳನ್ನು ನೀಡಿದರು. ವ್ರಣಗಳಾಗಿ ಬೆಳೆದಿದ್ದ ಅನಗತ್ಯ ಅಂಧಶ್ರದ್ಧೆಗಳೆಂಬ ಗೆಡ್ಡೆಗಳನ್ನು ಬುಡಸಹಿತ ಕಿತ್ತುಹಾಕುವಂತಹ ಶಸ್ತ್ರಚಿಕಿತ್ಸೆಯನ್ನು ನೀಡಿ, ಶ್ರೇಷ್ಠ ಸಮಾಜದ ಸುಧಾರಕರಾದರು. ಜಾತಿಭೇದ, ಲಿಂಗಭೇದಗಳ ಶಾಶ್ವತ ನಿವಾರಣೋಪಾಯಗಳನ್ನು ಕಂಡುಹಿಡಿದು ವಿಜ್ಞಾನಿಗಳಾದರು. ಜೀವನಶ್ರದ್ಧೆ ಧಾರ್ಮಿಕ ಚಿಂತನೆ-ಮಂಥನಗಳ ಮೂಲಕ ಕಾಯಕ ಸಮಾನತೆ, ಸಾಮಾಜಿಕ ನ್ಯಾಯ, ಸ್ತ್ರೀ

ಸಮಾನತೆ, ಅಭಿವ್ಯಕ್ತಿ ಸ್ವಾತಂತ್ರ್ಯಗಳ ಮೂಲಕ ಧಾರ್ಮಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಕ್ಕೆ ಮುಕ್ತ ಪ್ರವೇಶ ನೀಡಿದರು. ಜೀವನದ ಶಾಶ್ವತ ತತ್ವಗಳನ್ನು ಶೋಧಿಸುವಲ್ಲಿ ಜನರ ಗಮನ ಸೆಳೆದರು.

ಹಾಗಾಗಿ ಪ್ರಸ್ತುತ ನಿಬಂಧದಲ್ಲಿ ಹನ್ನೆರಡನೇ ಶತಮಾನದ ಸ್ತ್ರೀಪರಧೋರಣೆಗಳು ಆಧುನಿಕ ವಚನಕಾರ್ತಿಯರನ್ನು ಪ್ರಭಾವಿಸಿರುವ ಬಗ್ಗೆ ಅಲ್ಲಲ್ಲಿ ತೌಲನಿಕ ವಿವೇಚನೆಗೆ ಒಳಪಡಿಸಿದ್ದೇನೆ. ಸಮಾಜದಲ್ಲಿ ಶತಶತಮಾನಗಳಿಂದಲೂ ಸ್ತ್ರೀಯರನ್ನು ಕುರಿತು ಇದ್ದ ದೃಷ್ಟಿಕೋನವನ್ನು ಸಂಪಾದಿಸಿದ ಕೀರ್ತಿಯೂ ಈ ವಚನಕಾರರಿಗೆ ಸಲ್ಲುತ್ತದೆ. ಹೀಗಾಗಿ ಸ್ತ್ರೀಪರವಾದ ಅವರ ವಿಚಾರಧಾರೆಗಳು ಉತ್ತಮವೂ ಉದಾತ್ತವೂ ಆಗಿವೆ. ಭರತಖಂಡದ ಎಲ್ಲಾ ಧರ್ಮಗಳ ಧೋರಣೆಗಳಿಂಗಿಂತ ಭಿನ್ನವಾಗಿ ಮಾನವೀಯವಾಗಿದೆ ಯೆಂಬುದೇ ವಚನಕಾರರ ಹಿರಿಮೆಯನ್ನು ಎತ್ತಿ ಹಿಡಿದಿದೆ.

ಹನ್ನೆರಡನೇ ಶತಮಾನ ಸಾಹಿತ್ಯದಿಂದ ಪ್ರೇರಣೆ ಪಡೆದ ಆಧುನಿಕ ವಚನಕಾರರ ಸಂಖ್ಯೆಗೇನು ಕಡಿಮೆಯಿಲ್ಲ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಆಧುನಿಕ ವಚನಕಾರರೆಲ್ಲರೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಹನ್ನೆರಡನೇ ಶತಮಾನದ ವಚನ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಗಳಿಗೆ ಒಳಗಾಗಿದ್ದರೂ ವಚನ ಸಾಹಿತ್ಯ ರಚನೆಯಲ್ಲಿ ತಮ್ಮದೇ ಆದ ವಿಶಿಷ್ಟ ಶೈಲಿ, ಆಕರ್ಷಕ ಬರವಣಿಗೆ ವಿಶಿಷ್ಟ ಅರ್ಥವಂತಿಕೆ ಹಾಗೂ ಸ್ವಂತ ಪ್ರತಿಭೆಯಮೂಲಕ ವಚನ ಸಾಹಿತ್ಯ ರಚಿಸಿ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ಅಲ್ಲದೆ ವಚನ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ತಂದುಕೊಟ್ಟಿದ್ದಾರೆ. ಅವರಲ್ಲಿ ವೀರಶೈವ, ವಚನಕಾರರೇ ಪ್ರಮುಖರಾಗಿದ್ದಾರೆ. ಅವರುಗಳೆಂದರೆ ವಾಣಿ, ರತ್ನಮ್ಮ.ಕೆ.ಎಸ್, ಶಾಂತಾಜಗದೀಶ್, ಅನ್ನಪೂರ್ಣ ರಾಜೇಂದ್ರಶಿಶು, ಪ್ರೇಮಲೀಲಾ ಮುಂತಾದವರು ಈ ಶ್ರೇಷ್ಠರ ಗುಂಪಿಗೆ ಸೇರಿದವರಾಗಿದ್ದಾರೆ.

ಪ್ರಾಚೀನ ವಚನಕಾರರಂತೆ ಆಧುನಿಕ ವಚನಕಾರ್ತಿಯರೂ ಸಹ ತಮ್ಮ ತಮ್ಮ ವಚನಗಳಿಗೆ ಒಂದೊಂದು ವಚನಾಂಕಿತವನ್ನು ಇಟ್ಟುಕೊಂಡಿದ್ದಾರೆ. ಅಂದಿನ ವಚನಕಾರರಂತೆ ಆಧುನಿಕ ವಚನಕಾರ್ತಿಯರು ತಮ್ಮ ಆರಾಧ್ಯ ದೈವದ ಹೆಸರಿನಲ್ಲಿ ವಚನಸಾಹಿತ್ಯ ರಚನೆಗೆ ಕೈಹಾಕಿದ್ದಾರೆ. ಅಲ್ಲದೆ ಇವರೂ ಸಹ ಧಾರ್ಮಿಕ ಚಿಂತನೆ ಜೀವನಶ್ರದ್ಧೆ, ಚಿಂತನ–ಮಂಥನಗಳ ಮೂಲಕ ಕಾಯಕ, ಸ್ತ್ರೀಪುರುಷ ಸಮಾನತೆ, ಸಾಮಾಜಿಕ ನ್ಯಾಯ, ಸಾಮಾಜಿಕ ಮೌಲ್ಯಗಳು, ಜಾತಿಭೇದ, ಧರ್ಮಭೇದ, ಸಾಮಾಜಿಕ ಕಳಕಳಿ, ಸಾಮಾಜಿಕ ವಿಮರ್ಶೆ, ವೈಚಾರಿಕತೆ ಪ್ರಸ್ತುತ ಸಮಾಜ ಎದುರಿಸುತ್ತಿರುವ ಸಮಸ್ಯೆಗಳು, ತೊಂದರೆಗಳು, ನೋವುನಲಿವುಗಳು, ಸಮಾಜದ ಅಂಕುಡೊಂಕುಗಳನ್ನು, ಸ್ಥಿತಿಗತಿಗಳನ್ನು ತಮ್ಮ

ವಚನಗಳಲ್ಲಿ ಅಭಿವ್ಯಕ್ತಗೊಳಿಸಿ ಇವರು ಸಮಾಜದ ಸುಧಾರಕರಾಗಿದ್ದಾರೆ. ಅಲ್ಲದೆ ಆಧುನಿಕ ವಚನ ಸಾಹಿತ್ಯಕ್ಕೆ ಒಂದು ಭದ್ರವಾದ ತಳಹದಿಯನ್ನು ಹಾಕಿಕೊಟ್ಟಿದ್ದಾರೆ.

ಇಪ್ಪತ್ತನೆಯ ಶತಮಾನ ಹಾಗೂ ಇಪ್ಪತ್ತೊಂದನೆ ಶತಮಾನದಲ್ಲಿ ಆಧುನಿಕ ವಚನಸಾಹಿತ್ಯ ಒಂದು ಮುಖ್ಯ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದು ಸಾಹಿತ್ಯಕ್ಷೇತ್ರಕ್ಕೆ ಗಮನಾರ್ಹ ಕೊಡುಗೆ ನೀಡುವಲ್ಲಿ ಯಶಸ್ವಿಯಾಗಿದೆ. ಆಧುನಿಕ ದಿನಗಳಲ್ಲಿ ಗಣನೀಯ ಸಂಖ್ಯೆಯ ವಚನಕಾರರು ಹಾಗೂ ವಚನಕಾರ್ತಿಯರು ಈ ಸಾಹಿತ್ಯದ ಪ್ರಕಾರದಲ್ಲಿ ಆಳವಾಗಿ ಕೃಷಿ ಮಾಡಿ ವಿಶೇಷ ಅಧ್ಯಯನ ನಡೆಸಿ ಸಮೃದ್ಧಿ ಹಾಗೂ ಸತ್ಫಲಗಳನ್ನು ಈ ಸಮಾಜಕ್ಕೆ ಧಾರೆ ಎರೆದಿದ್ದಾರೆ. ಇದು ನಿಜಕ್ಕೂ ಪ್ರಶಂಸನೀಯವಾದುದು.

## ೨. ಅಧ್ಯಯನದ ಉದ್ದೇಶ

ಪ್ರಸ್ತುತ ನಿಬಂಧ 'ಮೈಸೂರು ನಗರದ ಆಧುನಿಕ ವಚನಕಾರ್ತಿ'ಯರನ್ನು ಕುರಿತ ಒಂದು ಅಧ್ಯಯನವಾಗಿದೆ. ಆಧುನಿಕ ವಚನಗಳಲ್ಲಿ ಅಡಕವಾಗಿರುವ ಗಾಢವಾದ ಆಳವಾದ ಅನುಭವ ಮತ್ತು ಸಂಸ್ಕೃತಿಯ ಚಿತ್ರಣ ಉತ್ತಮ ನಾಗರಿಕ ಸಮಾಜದ ಕುರುಹುಗಳನ್ನು ತಿಳಿದುಕೊಳ್ಳುವುದಾಗಿದೆ. ಜೊತೆಗೆ ವೈವಿಧ್ಯತೆಯಿಂದ ಕೂಡಿದ ಆಧುನಿಕ ವಚನಗಳು ಮತ್ತೆ ಮತ್ತೆ ಚರ್ಚೆಗೆ ಒಳಗಾಗಿ ಹೊಸ ಪ್ರಗತಿಪರ ಚಿಂತನೆ ಮಂಥನಗಳಿಗೆ ಹೊಸ ಆಲೋಚನೆಗೆ ದಾರಿಯಾಗಿ ಆ ಮೂಲಕ ಸಮಾಜದ ಜನರಲ್ಲಿ ವೈಜ್ಞಾನಿಕ ಹಾಗೂ ವೈಚಾರಿಕ ಅಂಶಗಳು ನೆಲೆಗೊಳ್ಳುವಂತೆ ಮಾಡುವುದರಲ್ಲಿ ಅದರ ಮಹತ್ವ ಅಡಗಿದೆ ಎಂದು ಹೇಳಬಹುದು.

ಆಧುನಿಕ ವಚನ ಸಾಹಿತ್ಯದಲ್ಲಿ ಕಂಡುಬರುವ ವಚನಾಮೃತ ಕನ್ನಡ ನಾಡಿನ ಎಲ್ಲ ಜನರಿಗೆ ತಿಳಿಯುವಂತಾಗಲಿ, ದೊರೆಯುವಂತಾಗಲಿ. ಆ ಮೂಲಕ ಸಮಾಜದ ಪ್ರತಿಯೊಬ್ಬ ಪ್ರಜೆಯೂ ಮಾನವೀಯ ಮೌಲ್ಯಗಳನ್ನು ಆಧ್ಯಾತ್ಮನೀತಿಗಳನ್ನು ತಿಳಿದುಕೊಂಡು ಅಜ್ಞಾನದ ಕತ್ತಲೆಯಿಂದ ಹೊರಬಂದು ಆರೋಗ್ಯ ಸಮಾಜದ ಸ್ಥಾಪನೆ ಮಾಡಬೇಕೆಂಬುದೇ ಇಲ್ಲಿನ ಸದುದ್ದೇಶವಾಗಿದೆ. ಮೇಲ್ವರ್ಗದವರಿಂದ ಬಡವರಿಗೆ, ದೀನದಲಿತರಿಗೆ, ಅಸಹಾಯಕ ಹೆಣ್ಣುಮಕ್ಕಳಿಗೆ ಈ ಸಮಾಜದಲ್ಲಿ ನಿರಂತರವಾಗಿ ನಡೆಯುತ್ತಿರುವ ಅನ್ಯಾಯ, ಅಸಮಾನತೆ, ದಬ್ಬಾಳಿಕೆ ದೌರ್ಜನ್ಯಗಳು ನಿವಾರಣೆಯಾಗಿ ಸಮಾಜದ ಪ್ರತಿಯೊಬ್ಬ ಪ್ರಜೆಯು ಮೇಲು-ಕೀಳು, ಬಡವ-ಬಲ್ಲಿದ, ಉಚ್ಚ-ನೀಚ, ಕರಿಯ-ಬಿಳಿಯರೆನ್ನದೆ ಪರಸ್ಪರರೆಲ್ಲರೂ ಕೂಡಿ ಪ್ರೀತಿವಿಶ್ವಾಸ, ಸಹಕಾರದಿಂದ ಸಹೋದರತೆಯಿಂದ ಬಾಳಬೇಕೆಂಬುದೇ ಇಲ್ಲಿನ ವಚನಗಳ ಮುಖ್ಯ ಆಶಯವಾಗಿದೆ.

ದೇವರ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ ಕಟ್ಟುಪಾಡುಗಳ ಹೆಸರಿನಲ್ಲಿ ಸ್ತ್ರೀಯರ ಮೇಲಾಗುತ್ತಿರುವ ದಬ್ಬಾಳಿಕೆ, ದೌರ್ಜನ್ಯ, ಕಂದಾಚಾರಗಳು ನಾಶವಾಗಿ ಪ್ರತಿಯೊಬ್ಬ ಸ್ತ್ರೀಯೂ ಸ್ವತಂತ್ರವಾಗಿ, ಸ್ವಾವಲಂಬಿಗಳಾಗಿ ಸುಖದಿಂದ ಬಾಳಬೇಕು. ಭಾರತೀಯ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಕೆಲವು ಗೊಡ್ಡು ಸಂಪ್ರದಾಯಗಳನ್ನು ಬುಡಸಮೇತ ಕಿತ್ತುಹಾಕಿ, ವೈಜ್ಞಾನಿಕ, ವೈಚಾರಿಕ, ಪ್ರಜ್ಞಾವಂತ ಸಮಾಜದ ಸ್ಥಾಪನೆ ಮಾಡುವುದು ಇಲ್ಲಿನ ವಚನಗಳ ಸಾರವಾಗಿದೆ.

ಸರ್ವ ಶೋಷಣೆಗಳಿಂದ ಮುಕ್ತವಾದ ಸರ್ವದೋಷಗಳಿಂದ ಸರ್ವಕೊರತೆಗಳಿಂದ ಮುಕ್ತವಾದ ರಾಮರಾಜ್ಯದ ಸ್ಥಾಪನೆ ಮಾಡುವುದರ ಮೂಲಕ ಮಾನವ ಸಮಾಜದ ಉದ್ಧಾರಕ್ಕಾಗಿ ಶ್ರಮಿಸುವುದು ಮನುಷ್ಯನು ತನ್ನಲ್ಲಿರುವ ಸ್ವಾರ್ಥ, ಮೋಸ, ವಂಚನೆ, ಕಪಟ, ದ್ರೋಹ, ಕಾಮ, ಕ್ರೋಧ, ಮದ, ಮತ್ಸರ, ದುರಹಂಕಾರ, ಪರಸ್ತ್ರೀಯರ ವ್ಯಾಮೋಹ ಸ್ವಾರ್ಥಸಾಧನೆ. ಮುಂತಾದ ದುಷ್ಟಗುಣಗಳನ್ನು ಹೋಗಲಾಡಿಸಿ ಅವನನ್ನು ಸಮಾಜದ ಸತ್ಪ್ರಜೆನ್ನಾಗಿ ರೂಪಿಸುವುದು ಇಲ್ಲಿನ ವಚನಗಳ ಆಶಯವಾಗಿದೆ.

ಇತ್ತೀಚೆಗೆ ಸಮಾಜದಲ್ಲಿ ಪ್ರತಿನಿತ್ಯ ನಡೆಯುತ್ತಿರುವ ಕೊಲೆಸುಲಿಗೆ, ದರೋಡೆ, ಅತ್ಯಾಚಾರ, ಭ್ರಷ್ಟಾಚಾರ, ಹೆಣ್ಣುಭ್ರೂಣ ಹತ್ಯೆ ಮುಂತಾದ ದುಷ್ಕೃತ್ಯಗಳಿಗೆ ಕಡಿವಾಣ ಹಾಕಿ ಮಾನವೀಯ ಸಂಬಂಧಗಳಿಗೆ ಹೆಚ್ಚು ಮಹತ್ವ ನೀಡಿ ಸಮಾಜದ ಜನರಲ್ಲಿ ಪರಸ್ಪರ ಪ್ರೀತಿ–ಪ್ರೇಮ, ಕರುಣೆ, ಸಹಾಯ, ಸಹಕಾರ, ಸಹೋದರತೆ, ತ್ಯಾಗ, ಸತ್ಯ, ನ್ಯಾಯ, ಧರ್ಮ, ನೀತಿಗಳನ್ನು ನೆಲೆಗೊಳಿಸುವುದಾಗಿದೆ.

ಧರ್ಮಭೇದ, ಜಾತಿಭೇದ, ಲಿಂಗಭೇದ ಮೊದಲಾದ ಅನಂತ ಸಮಸ್ಯೆಗಳನ್ನು ಸರಿಪಡಿಸಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ ಹಿಂದುಳಿದ ಜನರನ್ನು ಮೇಲೆತ್ತುವುದು ಆ ಮೂಲಕ ಸಮಾಜದಲ್ಲಿ ಎಲ್ಲಾ ರೀತಿಯ ಸಮಾನತೆಗಳನ್ನು ಸ್ಥಾಪಿಸುವುದು, ಆಧುನಿಕ ವಚನಸಾಹಿತ್ಯದ ಮಹತ್ವ ಮತ್ತು ಪ್ರಾಮುಖ್ಯತೆ ವಚನ ಸಾಹಿತ್ಯದ ಪ್ರತಿಫಲ ಎಲ್ಲಾ ಜನರಿಗೂ ದೊರೆಯಬೇಕು ಎಂಬುದರಲ್ಲಿದೆ. ಎಲ್ಲರೂ ವಿದ್ಯಾವಂತರಾಗಿ ಸುಶಿಕ್ಷಿತರಾಗಿ ಒಳ್ಳೆಯ ಸಮಾಜದ ಸ್ಥಾಪನೆಯಾಗಬೇಕು. ಮನುಷ್ಯ ತನ್ನಲ್ಲಿರುವ ರಾಕ್ಷಸತನ, ಕ್ರೂರತನವನ್ನು ಬಿಟ್ಟು ಜೀವನದ ಸಾರ್ಥಕತೆಯನ್ನು ಪಡೆಯಬೇಕು ಎಂಬುದು ನನ್ನ ಪ್ರಬಂಧದ ವ್ಯಾಪ್ತಿಗೆ ಒಳಪಡುವ ವಚನಗಳ ಸದುದ್ದೇಶವಾಗಿದೆ.

ಕೊನೆಯದಾಗಿ ಆಧುನಿಕ ವಚನ ಸಾಹಿತ್ಯದ ಬಗ್ಗೆ ಅದರ ಮಹತ್ವ ಮತ್ತು ಪ್ರಾಮುಖ್ಯತೆಯ ಬಗ್ಗೆ ಹಾಗೂ ಸಾಹಿತ್ಯದ ಧೋರಣೆಗಳ ಬಗ್ಗೆ ಮತ್ತೆ ಮತ್ತೆ ಚರ್ಚೆಯಾಗಲಿ ಎಂಬ ಧೋರಣೆಗಳ ಬಗ್ಗೆ ಮತ್ತೆ

ಮತ್ತೆ ಚರ್ಚೆಯಾಗಲಿ ಎಂಬ ಧೋರಣೆ ಈ ಪ್ರಬಂಧದ ಹಿಂದೆ ಇದೆ. ಹಾಗೂ ಕೆಲವು ಅಪೂರ್ಣ, ಅಸ್ಪಷ್ಟ ಚರ್ಚೆಯನ್ನು ಪೂರ್ಣಗೊಳಿಸಿ ಸರಿಪಡಿಸುವುದು ಮತ್ತು ಸ್ಪಷ್ಟಪಡಿಸುವುದು ಇವೇ ಮೊದಲಾದ ಮುಖ್ಯ ಕಾರಣಗಳು ಹಾಗೂ ವಿವಿಧ ಆಯಾಮಗಳಲ್ಲಿ ಕೃತಿಯ ಮೌಲ್ಯಮಾಪನ ಇವಿಷ್ಟು ಕಾರಣಗಳು ಅಧ್ಯಯನದ ಉದ್ದೇಶಕ್ಕೆ ಪರಸ್ಪರ ಪೂರಕವಾಗಿವೆ ಎಂದು ಹೇಳಬಹುದು.

## ೩. ಅಧ್ಯಯನದ ವ್ಯಾಪ್ತಿ

ಈ ಅಧ್ಯಯನ ವ್ಯಾಪ್ತಿಯನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಏಕೆಂದರೆ ಹನ್ನೆರಡನೇ ಶತಮಾನದ ಬಸವಾದಿ ಶರಣರ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಯಿಂದ ಬೆಳೆದು ಬಂದ ಸಾಹಿತ್ಯವಾಗಿರುವುದರಿಂದ ಕೆಲವು ಸಾಮ್ಯತೆಗಳನ್ನು ಗುರುತಿಸಬಹುದಾಗಿದೆ. ಈಗಾಗಲೇ ಪ್ರಾಚೀನ ಬಸವಾದಿ ವಚನ ಸಾಹಿತ್ಯವನ್ನು ಕುರಿತ ಅಧ್ಯಯನ ಹಲವಾರು ಸಂಶೋಧನೆಗಳು ಸಾಕಷ್ಟು ನಡೆದಿದೆ.

ಮೈಸೂರಿನಲ್ಲಿ ಆಧುನಿಕ ವಚನಕಾರ್ತಿಯರು ಸಾಕಷ್ಟು ಸಂಖ್ಯೆಯಲ್ಲಿದ್ದರೂ ಹಲವು ತಾಂತ್ರಿಕ ಕಾರಣಗಳಿಂದಾಗಿ ಕೆಲವು ವಚನಕಾರ್ತಿಯರ ವಚನಗಳು ಇನ್ನು ಪ್ರಕಟಗೊಂಡಿರುವುದಿಲ್ಲ ಹಾಗೂ ಕೆಲವು ವಚನಗಳು ಈಗ ಮುದ್ರಣಗೊಂಡು ಪ್ರಕಟವಾಗುವ ಸಾಧ್ಯತೆ ಇದೆ. ಹೀಗಾಗಿ ಈ ಪ್ರಬಂಧದ ವ್ಯಾಪ್ತಿಯನ್ನು ಮುಂದಿನ ದಿನಗಳಲ್ಲಿ ಹಿಗ್ಗಿಸಿಕೊಳ್ಳುವ ಸಾಧ್ಯತೆಗಳಿವೆ.

ವಚನಕಾರ್ತಿಯರ ಅಧ್ಯಯನವೂ ಒಂದು ಪ್ರಮಾಣದಲ್ಲಿ ನಡೆದಿದ್ದು ಪ್ರೊ. ಜಗದಾಂಬ ಮಲ್ಲೇದೇವರು, ಡಾ. ವಿಜಯಶ್ರೀ ಸಬರದ, ಡಾ. ಪ್ರೀತಿ ಶುಭಚಂದ್ರ ಈ ನಿಟ್ಟಿನಲ್ಲಿ ಕೆಲಸವನ್ನು ಮಾಡಿದ್ದಾರೆ. ಆದರೆ ಎಂ.ಫಿಲ್ ಅಧ್ಯಯನದ ಒಂದು ಭಾಗವಾಗಿ ಈ ನಿಬಂಧವಿರುವುದರಿಂದ ಕಾಲದ, ಪುಟದ ನಿಮಿತ್ತವೂ ಒಳಗೊಂಡಂತೆ ನನ್ನ ಅಧ್ಯಯನವನ್ನು ಮೈಸೂರು ನಗರದ ವಚನಕಾರ್ತಿಯರ ವ್ಯಾಪ್ತಿಗೆ ಸೀಮಿತಗೊಳಿಸಿಕೊಂಡಿದ್ದೇನೆ.

ಮೈಸೂರು ನಗರ ಮುಖ್ಯವಾಗಿ ಸಾಂಸ್ಕೃತಿಕ ನಗರಿಯೆಂದೇ ಹೆಸರುವಾಸಿಯಾಗಿದ್ದು, ಎಲ್ಲ ಕ್ಷೇತ್ರಗಳಂತೆ ಸಾಹಿತ್ಯಕ್ಷೇತ್ರಕ್ಕೂ ಮೈಸೂರು ನಗರದ ಕೊಡುಗೆ ಅಪಾರವಾದುದು. ಅನೇಕ ಲೇಖಕರಂತೆ ವಚನಕಾರ್ತಿಯರನ್ನೂ ಈ ನಗರ ಕನ್ನಡನಾಡಿಗೆ ಕೊಡುಗೆಯನ್ನಾಗಿ ನೀಡಿದೆ. ಸ್ವಾತಂತ್ರ್ಯ, ಸಮಾನತೆ, ಶಿಕ್ಷಣ ಇವುಗಳಿಂದಾಗಿ ಅನೇಕ ಮಹಿಳೆಯರು. ಆಧುನಿಕ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವಚನಸಾಹಿತ್ಯದ (ಸಂವೇದನೆಗೆ) ಪ್ರೇರಣೆಗೆ ಒಳಗಾದ ಅನೇಕ ಮಹಿಳೆಯರು

ಆಧುನಿಕ ಸಂವೇದನೆಗೆ ಸ್ಪಂದಿಸಿ ತಮ್ಮ ಅನುಭವಗಳಿಗೆ ವಚನಗಳ ಮೂಲಕ ಅಭಿವ್ಯಕ್ತಿ ನೀಡುವ ಪ್ರಯತ್ನವನ್ನು ಮಾಡಿದ್ದಾರೆ.

ಇಲ್ಲಿ ಆಯ್ಕೆಮಾಡಿಕೊಂಡಿರುವ ಈ ನಗರದ ವಚನಗಾರ್ತಿಯರು ಶೈಕ್ಷಣಿಕ ಕ್ಷೇತ್ರದಲ್ಲಿ ದುಡಿಯುತ್ತಿರುವವರಲ್ಲದೆ. ಕಲಾವಿದರಾಗಿ, ಗೃಹಿಣಿಯರಾಗಿ ತಮ್ಮ ಬದುಕನ್ನು ಸವೆಸುತ್ತಿರುವವರಾಗಿದ್ದಾರೆ. ಹಲವು ಅನುಭವಗಳಿಗೆ ತೆರೆದುಕೊಂಡಿರುವ ಇವರು ಆ ಅನುಭವಗಳಿಗೆ ಮೂರ್ತಸ್ವರೂಪ ನೀಡಿ ವಚನಗಳ ಮೂಲಕ ಅಭಿವ್ಯಕ್ತಿಸಿರುವ ಬಗೆ ಅನನ್ಯವಾದುದು. ಈ ವಚನಗಳ ಅನನ್ಯತೆಯನ್ನು ಕಟ್ಟಿಕೊಡುವ, ಪ್ರಸ್ತುತಪಡಿಸುವ ಉದ್ದೇಶ ಇಲ್ಲಿನ ಪ್ರಬಂಧದ್ದಾಗಿದೆ. ಈ ಬಗೆಯ ಅಧ್ಯಯನ ಇದುವರೆಗೂ ನಡೆಯದಿರುವ ಕೊರತೆಯನ್ನು ತುಂಬುವ ಪ್ರಯತ್ನ ನನ್ನ ಈ ಬರಹಕ್ಕಿದೆ.

## ೪. ಆಧುನಿಕ ವಚನಕಾರ್ತಿಯರ ಕಿರು ಪರಿಚಯ:-

**೧. ಡಾ. ರತ್ನಮ್ಮ ಕೆ.ಎಸ್. :-** ಡಾ. ರತ್ನಮ್ಮ ಕೆ.ಎಸ್. ಇವರು ಆಧುನಿಕ ಶ್ರೇಷ್ಠ ವಚನಕಾರ್ತಿಯರಲ್ಲಿ ಒಬ್ಬರಾಗಿದ್ದಾರೆ. ಇವರು ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಸಾಹಿತ್ಯ ಅವರ ಬದುಕಿನ ಉಸಿರಾಗಿದ್ದು ಸದಾ ಅಧ್ಯಯನಶೀಲರಾಗಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ್ದಾರೆ.

ಡಾ. ರತ್ನಮ್ಮ ಕೆ.ಎಸ್ ರವರು ಮೈಸೂರಿನ ಮಲ್ಲಮ್ಮ ಮರಿಮಲ್ಲಪ್ಪ, ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಇಪ್ಪತ್ತು ವರ್ಷಗಳಿಂದಲೂ, ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಕಾಲೇಜಿನ ಪ್ರಾಚಾರ್ಯರಾಗಿ ಸೇವೆಸಲ್ಲಿಸಿದ್ದಾರೆ. ಇವರು ಲೇಖಕಿ, ಕವಯತ್ರಿಯೂ ಆಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಉತ್ತಮಸೇವೆ ಸಲ್ಲಿಸುತ್ತಿದ್ದಾರೆ. ವೈಚಾರಿಕತೆ ಮತ್ತು ಸಮಕಾಲೀನ ಸ್ಪಂದನಾಶೀಲತೆಯಿಂದ ಪ್ರಸ್ತುತತೆಯನ್ನು ತಮ್ಮ ವಚನಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಅಧ್ಯಯನಶೀಲತೆ, ಸಂಶೋಧನಾಪರತೆಯ ನಿಲುವುಗಳು ವಿಶ್ಲೇಷಣೆ, ವಿಮರ್ಶನಾ ಪ್ರಜ್ಞೆ ಅವರ ಕೃತಿಗಳಲ್ಲಿ ನಿಚ್ಚಳವಾಗಿದೆ.

ಈ ನಿಟ್ಟಿನಲ್ಲಿ ಡಾ. ರತ್ನಮಮ್ಮ ಕೆ.ಎಸ್. ಅವರು ಈಗಾಗಲೇ ''ಪ್ರಣವ ಜ್ಯೋತಿ''ಯನ್ನು ಬೆಳಗಿಸಿ ಇದೀಗ ವಚನ ಜ್ಯೋತಿಯ ಹೊಂಬೆಳಕನ್ನು ಪಸರಿಸುತ್ತಿರುವುದು ಅವರ ಸಾರಸ್ವತ ಲೋಕದ ಸಾಧನೆಯ ಮತ್ತೊಂದು ಹೆಗ್ಗುರುತು. ಒಟ್ಟಂದದಲ್ಲಿ ಸಮರಸವೇ ಜೀವನ ಸಮರಸದಲ್ಲಿಯೇ ಜೀವನದ ಆನಂದವಿದೆ ಎಂಬ ಉದಾತ್ತ ಸಂದೇಶ ಸಾರುವ 'ವಚನ ಜ್ಯೋತಿ' ಆಧುನಿಕ ವಚನ ಪ್ರಕಾರದ ಗಣ್ಯಕೃತಿಗಳಲ್ಲಿ ಒಂದಾಗಿದೆ. ಇಂಥ ಗಮನಾರ್ಹ ಕೊಡುಗೆ ನೀಡಿರುವ ಡಾ. ರತ್ನಮ್ಮ ಕೆ.ಎಸ್.ರವರು ಆಧುನಿಕ ವಚನಕಾರ್ತಿಯರ ಸಾಲಿನಲ್ಲಿ ಗಣ್ಯಸ್ಥಾನ ಪಡೆದುಕೊಂಡು ಜನಕೋಟಿಯ ಹೃತ್ಪೂರ್ವಕ, ಪ್ರೀತಿ - ಅಭಿನಂದನೆಗೆ ಕಾರಣರಾಗಿದ್ದಾರೆ. ಇವರ ಆಧುನಿಕ ವಚನಗಳು ಮುಂದಿನ ವಚನಕಾರರಿಗೆ ಭದ್ರವಾದ ಬುನಾದಿಯನ್ನು ಹಾಕಿಕೊಡುವುದರ ಮೂಲಕ ಯುವ ವಚನಕಾರ್ತಿಯರಿಗೆ ಮುಂದಿನ ಪೀಳಿಗೆಗೆ ದಾರಿದೀಪವಾಗಿದ್ದಾರೆ.

**೨. ಶಾಂತಾ ಜಗದೀಶ್:-** ಶ್ರೀಮತಿ ಶಾಂತಾ ಜಗದೀಶ್‌ರವರ ವೃತ್ತಿಗಾಯನವಾಗಿದ್ದು ಅವರ ಪ್ರವೃತ್ತಿ ಬರವಣಿಗೆಯಾಗಿದೆ. ಸಾಹಿತ್ಯದ ಆರಂಭದ ರಚನೆಗಳಿಂದ ಹಿಡಿದು ಆಧುನಿಕ ಕಾವ್ಯ ಪ್ರಕಾರಗಳವರೆಗೆ ಎಲ್ಲದಕ್ಕೂ ರಾಗ ಸಂಯೋಜಿಸಿ, ನಾಡಿನುದ್ದಕ್ಕೂ ಅತ್ಯಂತ ಮಧುರವಾಗಿ ಹಾಡುವ ಶಾಂತಾ ಜಗದೀಶ್‌ರ ಕಂಠಸಿರಿ ಯಾರನ್ನು ತಾನೆ ತನ್ಮಯಗೊಳಿಸದು? 'ಎರಡು ಸೆಳೆ ಮೌಲ್ಯ' ಮುಂತಾದ ಕವನಸಂಕಲನಗಳನ್ನು

ಹೊರತರುವುದರ ಮೂಲಕ, ಕವಯತ್ರಿಯೂ ಆಗಿದ್ದಾರೆ. ತಾವು ಬೆಳೆಯುವುದರ ಜೊತೆಗೆ ಇತರರನ್ನು ಬೆಳೆಸುವ ದೃಷ್ಟಿಯಿಂದ 'ಭಾವಸಂಪದ' ಸಂಸ್ಥೆಯನ್ನು ಹುಟ್ಟುಹಾಕಿದ್ದಾರೆ. ವಿವಿಧ ಸಂಘಸಂಸ್ಥೆಗಳಲ್ಲಿ ಸಕ್ರಿಯ ಸದಸ್ಯರಾಗುವುದರ ಜೊತೆಗೆ ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಆಕಾಶವಾಣಿಗಳಲ್ಲದೆ ಸಾರ್ವಜನಿಕವಾಗಿ ನೂರಾರು ಕಾರ್ಯಕ್ರಮಗಳನ್ನು ನೀಡಿ ಸುಗಮ ಸಂಗೀತ ಹಾಗೂ ವಚನಗಾಯಕಿಯಾಗಿ ಪ್ರಸಿದ್ಧರಾಗಿದ್ದಾರೆ. ಮೂಲತಃ ಮೈಸೂರಿನವರಾದ ಶಾಂತಾ ಜಗದೀಶ್‌ರವರು ಇದೀಗ ಆಧುನಿಕ ವಚನಕಾರ್ತಿಯರ ಸಾಲಿಗೆ ಸೇರಿದ್ದಾರೆ. ಅವರ ನೂರೆಂಟು ವಚನಗಳು ಸಾಧನೆಯ ಮೈಲುಗಲ್ಲಾಗಿವೆ. 'ಶಾಂತನುಡಿ' ಅವರ ಕನಸಿನ ಕೂಸಾಗಿ ರಚಿತವಾಗಿರುವುದು ಬಹಳ ಸಂತೋಷದ ಸಂಗತಿಯಾಗಿದೆ.

ಪ್ರಬುದ್ಧ ಚೇತನವೊಂದರ ಚಿಂತನಾಶೀಲತೆ ಈ ಆಧುನಿಕ ವಚನಗಳಲ್ಲಿ ಹೆಪ್ಪುಗಟ್ಟಿದೆ. ನುಡಿ–ಕಿಡಿಗಳಾಗಿ ಹೊರಹೊಮ್ಮಿದೆ – ಬಸವಾದಿ ಶರಣರ, ದಾಸರ, ಮಹಾಕವಿಗಳ ಪ್ರಭಾವಕ್ಕೆ ಒಳಗಾದ ಇವರು ಸದಾ ಸೌಜನ್ಯ ಶಾಂತತೆಯ ಸಾಕಾರವಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಶಾಂತಾ ಜಗದೀಶರ ಆಧುನಿಕ ವಚನಗಳು ವೈಯಕ್ತಿಕ ಅತೃಪ್ತಿಯಿಂದ ಬಂದಿದ್ದಲ್ಲ ಸಾಮಾಜಿಕ ವಿಷಮತೆ, ಧಾರ್ಮಿಕ ಶೋಷಣೆ ಸ್ವಾರ್ಥಸಾಧನೆಯ ಸೋಗಲಾಡಿತನ ಇವುಗಳಿಂದ ಉಂಟಾಗುವ ವಿನಾಶಾತ್ಮಕ ಪರಿಣಾಮಗಳ ಭಾವನೆಯಿಂದ ಮೂಡಿಬಂದವುಗಳು.

"ರಾಕ್ಷಸರು ಬೇರೆ ಅಲ್ಲಯ್ಯ
ದೇವತೆಗಳೇ ಬೇರೆ ಇಲ್ಲಯ್ಯ
ಮನುಷ್ಯನ ಮನಸ್ಸಿನೊಳಗೆ
ಎಲ್ಲರೂ ಇದ್ದಾರಯ್ಯ ಶಾಂತಾ ಜಗದೀಶ"

ಶಾಂತನುಡಿ, ಶಾಂತಾ ಜಗದೀಶ್, ಪು. ೦೯

ಎನ್ನುವ ಇವರ ಮಾತುಗಳ ಹಿಂದೆ ಆವೇಶಕ್ಕಿಂತ, ವಿಚಾರಶೀಲತೆ, ಕೋಪಕ್ಕಿಂತ ಸಮಷ್ಟಿ ಉದ್ಧಾರದ ಕಳಕಳಿ ಇರುವುದನ್ನು ಕಾಣಬಹುದು.

**೩. ಸರೋಜಮ್ಮ ನಾಗರಾಜು:** ಸರೋಜಮ್ಮ ನಾಗರಾಜು ಇವರೂ ಸಹ ಆಧುನಿಕ ಶ್ರೇಷ್ಠ ವಚನಕಾರರಲ್ಲಿ ಒಬ್ಬರಾಗಿದ್ದಾರೆ. ಶರಣೆ ಸರೋಜಮ್ಮನವರು ರಚಿಸಿರುವ ವಚನಗಳಲ್ಲಿ ಮತ್ತು ಗೀತೆಗಳಲ್ಲಿ, ಬಸವಭಕ್ತಿ, ಶರಣಾಗತಿ ಭಾವನೆ ತುಂಬಿತುಳುಕಿದೆ. ಜೊತೆಗೆ ಜೀವನಾನುಭವ, ಸಮಾಜದ ವಿಶ್ಲೇಷಣೆ,

ವಿಡಂಬನೆ ಎಲ್ಲ ಜೀವಂತವಾಗಿ ಒಡಮೂಡಿದೆ. ಇಪ್ಪತ್ತು - ಇಪ್ಪತ್ತೊಂದನೆಯ ಶತಮಾನದ ಆಧುನಿಕ ವಚನಕಾರರ ಸಾಲಿನಲ್ಲಿ ಸರೋಜಮ್ಮ ನಾಗರಾಜುರವರು ಸೇರುತ್ತಿರುವುದು ಬಸವಧರ್ಮ ಪೀಠ ಮತ್ತು ರಾಷ್ಟ್ರೀಯ ಬಸವದಳಕ್ಕೆ ಬಹಳ ಹೆಮ್ಮೆಯ ಸಂಗತಿಯಾಗಿದೆ.

ಧರ್ಮ, ಅಧ್ಯಾತ್ಮ ಕೆಲವರಿಗೆ ಭಾಷಣ ಮತ್ತು ಬರಹಕ್ಕೆ ಮಾತ್ರ ಸೀಮಿತ. ಅನುಷ್ಠಾನಕ್ಕಲ್ಲ. ಅನುಭಾವಿಗಳಿಗೆ ಧರ್ಮ ಮತ್ತು ಅಧ್ಯಾತ್ಮಗಳು - ಜೀವನದ ಹಾಸುಹೊಕ್ಕಾಗಿದೆ. ಇಂಥವರ ಸಾಲಿಗೆ ಸೇರುವವರು ಶರಣೆ ಸರೋಜಮ್ಮ ನಾಗರಾಜು. ಅವರು ತಮ್ಮ ಅನುಭವ ಹಾಗೂ ಅನಿಸಿಕೆಗಳನ್ನು ವಚನಗಳ ರೂಪದಲ್ಲಿ ಹಾಡಿನ ಮೂಲಕ ಬರೆದು ಹಾಗೆಯೇ ಇಡುತ್ತಲಿದ್ದರು. "ಇದು ನಮ್ಮೆಲ್ಲರ ಗಮನಕ್ಕೆ ಬಂದಾಗ ಪುಸ್ತಕ ರೂಪದಲ್ಲಿ ಬರಲೇಬೇಕು ಎಂದು ಒತ್ತಾಯಿಸಿದಾಗ" ಅವುಗಳನ್ನು ಬರೆದುಕೊಟ್ಟರಂತೆ.

ಮೈಸೂರು ರಾಷ್ಟ್ರೀಯ ಬಸವ ದಳದ ಪ್ರಧಾನ ಕಾರ್ಯದರ್ಶಿ ಎಂಬುದು ಕಾರ್ಯನಿಮಿತ್ತ ಹುದ್ದೆಯಾದರೂ ಅವರೇ ರಾಷ್ಟ್ರೀಯ ಬಸವದಳದ ಸಚೇತನ ಶಕ್ತಿ. ಇವರ ಪ್ರೇರಕಶಕ್ತಿ ಶರಣ. ಎಂ. ನಾಗರಾಜು ಅವರು. ಈ ಉಭಯತರರದೂ ಒಂದು ಆದರ್ಶ ಜೀವನ. ಅವರಿಗೆ ಮಕ್ಕಳು ಆಗದೇ ಇದ್ದಾಗ ಇದನ್ನೊಂದು ಕೊರತೆ ಎಂದು ಭಾವಿಸದೆ ತಾವೇ ಬಸವ ಕಂದರಾಗಿ ಶ್ರೀಗುರು ಬಸವಣ್ಣನವರಿಗೆ ತಮ್ಮನ್ನು ತಾವು ಅರ್ಪಿಸಿಕೊಂಡು, ತನು, ಮನ, ಧನಗಳನ್ನು ಅರ್ಪಿಸಿಕೊಂಡು ಬಸವತತ್ವ ಪ್ರಚಾರಕ್ಕೇ ತಮ್ಮ ಅಮೂಲ್ಯ ಸಮಯವನ್ನು ಮೀಸಲಿಟ್ಟಿದ್ದಾರೆ. ಅನೇಕ ತೊಂದರೆಗಳ ಮಧ್ಯೆಯೂ ಶರಣ-ಸಂಗಮ, ಸಾಮೂಹಿಕ ಪ್ರಾರ್ಥನೆ ಮತ್ತು ಶರಣರ ಜಯಂತಿ ಉತ್ಸವ, ಲಿಂಗೈಕ್ಯ ಸಂಸ್ಕರಣೆ ಮುಂತಾದವುಗಳನ್ನು ಬಹಳ ನಿಷ್ಠೆಯಿಂದ ನಡೆಸಿಕೊಂಡು ಬರುತ್ತಿದ್ದಾರೆ ಎಂಬುದು ತುಂಬಾ ಶ್ಲಾಘನೀಯವಾದ ಸಂಗತಿಯಾಗಿದೆ.

**೪. ರಾಜೇಂದ್ರ ಶಿಶು: (ಎಂ.ಎ.ನೀಲಾಂಬಿಕಾ):-** ಬಸವ ಸಂತಾನ ಶ್ರೇಷ್ಠರು ಸಾತ್ವಿಕ ಶರಣಜೀವಿ ಅನುಭಾವಿ ಕವಯತ್ರಿ, ನೂತನ ವಚನಕಾರ್ತಿ, ಶಿವಶರಣೆ, ಎಂ.ಎ.ನೀಲಾಂಬಿಕಾ ಮೈಸೂರು. ಇವರು ಸ್ವಾನುಭವದಿಂದ ರಚಿಸಿರುವ ವಚನಗಳು ವಚನೋದ್ಭವ-ಭಾಗ-೨ ಎಂಬ ಹೆಸರಿನಲ್ಲಿ ಪ್ರಕಾಶನ-ಗೊಳ್ಳುತ್ತಿರುವುದು ನಮಗೆ ಸಂತಸವನ್ನುಂಟು ಮಾಡಿದೆ. ಬಸವಾದಿ ಶರಣರ ಅನುಭಾವದ ಬಳಿವಿಡಿದು ಅರಿವು-ಆಚಾರ ಅನುಭಾವಗಳನ್ನು ಅಂಗವಾಗಿಸಿಕೊಂಡ ಶರಣೆ ನೀಲಾಂಬಿಕ ತಾಯಿಯವರು ಶಿವರಾತ್ರಿ ರಾಜೇಂದ್ರರು ಎಂಬ ವಚನಾಂಕಿತದಿಂದ ವಚನ ರಚಿಸುತ್ತಿದ್ದು ಅವರ ವಚನಗಳಲ್ಲಿ ಶರಣ ಸಂಸ್ಕೃತಿ, ಧರ್ಮ, ಪರಂಪರೆಯು ಅಭಿವ್ಯಕ್ತಗೊಂಡಿದೆ.

ಇಂತಹ ವಚನೋದ್ಭವ ಗ್ರಂಥದ ಮೂಲಕ ಸಮಷ್ಠಿಯ ಕಲ್ಯಾಣವಾಗಲಿ, ಈ ಶರಣೆಯವರಿಂದ ಅನಂತ ವಚನಗಳು ಮೂಡಿ ಬರಲಿ ಎಂದು ಆಶಿಸುತ್ತೇನೆ. ರಾಜೇಂದ್ರ ಶಿಶು ಎಂಬ ಕಾವ್ಯನಾಮದಿಂದ ಶರಣ ಸಾಹಿತ್ಯ ಕ್ಷೇತ್ರದಲ್ಲಿ ಅನುಭಾವಿಯಕವಯತ್ರಿಯಾಗಿ, ನೂತನ ವಚನಗಾರ್ತಿಯಾಗಿ, ನಾಟಕಕಾರರಾಗಿ, ಒಳ್ಳೆಯ ಹೆಸರು ಮಾಡಿರುವ ಎಂ.ಎ.ನೀಲಾಂಬಿಕ ಅವರು ರಾಜೇಂದ್ರ ಶಿಶು ಎಂಬ ಕಾವ್ಯನಾಮದಿಂದ ಈಗಾಗಲೇ ಕನ್ನಡ ಸಾರಸ್ವತ ಪ್ರಪಂಚಕ್ಕೆ ಚಿರಪರಿಚಿತರಾಗಿದ್ದಾರೆ. ಶಿವರಾತ್ರಿ ರಾಜೇಂದ್ರರು ಎಂಬ ವಚನಾಂಕಿತದಿಂದ ಈ ಶರಣೆ ಸೋದರಿಯು ಬರೆದಿರುವ ವಚನಗಳಲ್ಲಿ ಗುರು, ಹಿರಿಮೆ, ಗುರು ಕಾರುಣ್ಯ, ಶಿವಾನುಭವ, ಸಮಾಜ ವಿಡಂಬನೆ, ನೀತಿಯ ಮಾತುಗಳು, ಮೂಢನಂಬಿಕೆ ನಿರಸನ, ಅನುಭಾವ ಮಾರ್ಗ, ಬಸವ ಭಕ್ತಿಯು ಹೊನಲಾಗಿ ಪ್ರವಹಿಸಿದೆ ಎಂದು ಹೇಳಿದರೆ ತಪ್ಪಾಗಲಾರದು.

ಹನ್ನೆರಡನೇ ಶತಮಾನದಲ್ಲಿ ಕಲ್ಯಾಣದ ಅನುಭವ ಮಂಟಪದಿಂದ ಬಸವಾದಿ ಶರಣರ ಅನುಭಾವದಿಂದ ಉಗಮಗೊಂಡ ವಚನವಾಹಿನಿಯು ಇಪ್ಪತ್ತನೆಯ ಶತಮಾನಕ್ಕೂ ಮಹಾ ಪ್ರವಾಹವಾಗಿ ಇಡೀ ಪ್ರಪಂಚದ ಜನಮಾನಸದ ಕೊಳೆಯನ್ನು ತೊಳೆಯುತ್ತಾ ಅನುಭಾವ ಸುಧೆಯನ್ನು ಉಣಿಸುತ್ತಾ ಮಾನವ ಕುಲದ ಕಲ್ಯಾಣ ಮಾಡುತ್ತಿದೆ. ಈ ವಚನ ಪ್ರವಾಹಕ್ಕೆ ಹೊಸ- ಹೊಸ. ಝುರಿಗಳು, ನದಿಗಳು ಸೇರುತ್ತಲಿವೆ.

ಶರಣೆ ನೀಲಾಂಬಿಕಾ ಅವರು ಈ ಶತಮಾನದ ನೂತನ ವಚನಕಾರರಾದ ಹರ್ಡೇಕರ ಮಂಜಪ್ಪ, ಸಿದ್ದಯ್ಯಪುರಾಣಿಕ, ಮಹದೇವ ಬಣಕಾರ, ಹೆಚ್.ತಿಪ್ಪೇರುದ್ರಸ್ವಾಮಿಗಳು, ಕುಮಾರ ಕಕ್ಕಯ್ಯ, ಪೋಳ, ಸಂಗಮೇಶ್ ಹೊಸಮನಿ, ಬ.ಗಿ.ಯಲ್ಲಟ್ಟಿ, ಅನ್ನದಾನಯ್ಯ ಪುರಾಣಿಕ, ಸಿದ್ದಯ್ಯ ಲಂಗೋಟಿ, ಮನೋಹರ ಮೈದರಗಿ, ಅಂಬಿಗರ ಚೌಡಯ್ಯ ಮುಂತಾದವರ ಬಸವ ತತ್ವ ನಿಷ್ಠ ಶರಣ-ಶರಣೆಯರ ಪರಂಪರೆಯಲ್ಲಿ ಸೇರ್ಪಡೆಯಾಗುತ್ತಿರುವುದು ಸಂತೋಷ ಮತ್ತು ಆನಂದದ ಸಂಗತಿಯಾಗಿದೆ.

**೩. ಅನ್ನಪೂರ್ಣ: (ಆನಂದಸಿಂಧು):** ಅನ್ನಪೂರ್ಣ ಅವರ 'ಆನಂದ ಸಿಂಧು' ವಚನಗಳ ಸಂಗ್ರಹ ೧೫೭ ವಚನಗಳನ್ನು ಒಳಗೊಂಡಿದೆ. ಎಲ್ಲಾ ವಚನಕಾರರಂತೆ ಅನ್ನಪೂರ್ಣ ಅವರೂ ಸಹ 'ಆನಂದಸಿಂಧು' ಎಂಬ ವಚನಾಂಕಿತವನ್ನಿಟ್ಟುಕೊಂಡು ವಚನ ರಚಿಸಿದ್ದಾರೆ. ಇದು ಅವರ ಚೊಚ್ಚಲ ಕೃತಿ ಆತ್ಮತೃಪ್ತಿಗಾಗಿ ವಚನ ರೂಪದಲ್ಲಿ ಬರೆಯಲು ತೊಡಗಿದ್ದಾಗಿ ತಮ್ಮ ಅರಿಕೆಯಲ್ಲಿ ಹೇಳಿಕೊಂಡಿದ್ದಾರೆ.

ಇವರ ವಚನಗಳ ಬಗ್ಗೆ ಹೇಳುವುದಾದರೆ ಅವರೇ ಹೇಳಿಕೊಂಡಂತೆ ಜೀವನದ ಸಾಧನೆಯ ಮಾರ್ಗದಲ್ಲಿ ಗುರುವಿನ ಆಶೀರ್ವಾದ, ಅಂತರಂಗದ ಮೊರೆ, ತಮಗಾದ ಅನುಭವಗಳನ್ನು ವಚನಗಳ

ರೂಪದಲ್ಲಿ ದಾಖಲಿಸಲಿಚ್ಚಿಸಿದ್ದಾರೆ. ಅವುಗಳನ್ನು ಓದುತ್ತಾ ಹೋದಂತೆಲ್ಲಾ ಇದೇನು? ನಾನು ಶರಣರ ವಚನಗಳನ್ನೇ ಓದುತ್ತಿರುವೆನೇ? ಎನಿಸಿತು. ಆದರೆ ಅವರ ಬಹುತೇಕ ವಚನಗಳಲ್ಲಿ ಹನ್ನೆರಡನೇ ಶತಮಾನ ವಚನಕಾರರ ಪ್ರಭಾವ ಗಾಢವಾಗಿ ಛಾಪುಗೊಂಡಂತಿವೆ. ಇವರ ವಚನಗಳಲ್ಲಿಯೂ ಜೀವನದ ಆರಂಭಿಕ ತೊಳಲಾಟ ಕಂಡುಬರುತ್ತದೆ. ಅವರೇ ಹೇಳುವಂತೆ "ಸಂಸಾರವೆಂಬ ವಿಷಸರ್ಪ ಬರುತಿಹುದು ಕಚ್ಚಲೆಂದು ಈ ಸಂಸಾರ ಸಾಗರದಿಂದೆನ್ನ ಕರವಿಡಿದೆತ್ತಿಕೊಳ್ಳಿ" ಎಂದು ಪ್ರಾರ್ಥಿಸಿದ್ದಾರೆ. ಮಾಹೆಯ ಉಪಟಳವನ್ನು ಕೆಲವು ವಚನಗಳಲ್ಲಿ ಬಿಡಿ-ಬಿಡಿಯಾಗಿ ಬಿಡಿಸಿಟ್ಟದ್ದಾರೆ. ಅಲ್ಲದೆ ಮಾನವನ ಚಾಂಚಲ್ಯತೆಯನ್ನು ಕುರಿತು ಹೇಳುವ ಈ ವಚನವನ್ನು ನೋಡೋಣ.

"ಮನವೆಂಬುದು ಮರ್ಕಟವಯ್ಯ
ಅದು ಹಲವು ಕೊಂಬೆಗೆ ಹಾರುತ್ತಿಹುದಯ್ಯ
ಈ ಮರ್ಕಟವ ನಾನೆಂತು ನಿಗ್ರಹಿಸಯ್ಯ
ಎನ್ನ ಪ್ರಿಯ ಆನಂದಸಿಂಧುವಿನೆಡೆಗೆ ಇದು
ಹೋಗಲೀಯದಯ್ಯ."

(ಆನಂದಸಿಂಧು ಅನ್ನಪೂರ್ಣ ವಚನ ಸಂಖ್ಯೆ:೫ ಪು. ೧೬)

ಈ ವಚನ "ಕೊಂಬೆಯ ಮೇಲಣ ಮರ್ಕಟದಂತೆ ಲಂಘಿಸುವುದು ಎನ್ನ ಮನನೋಡಾ" ಎಂಬ ಬಸವಣ್ಣನವರ ವಚನವನ್ನು ನೆನಪಿಗೆ ತರುತ್ತದೆ. ಹೀಗೆ ಅನ್ನಪೂರ್ಣ ಅವರು ವಚನಕಾರರ ವಚನಗಳ ಆಳವಾದ ಅಭ್ಯಾಸದಿಂದ ಪ್ರಭಾವಿತರಾದರೂ ಸ್ವಂತಿಕೆಯನ್ನು ಮೆರೆದಿದ್ದಾರೆ. ಅವರ ಭಾಷೆ, ಸರಳ ಭಾವ ಬಂಧೂರ ಅರ್ಥಗರ್ಭಿತವಾಗಿದೆ. ಅನ್ನಪೂರ್ಣ ಅವರಿಗೆ ಬಿಜಾಪುರದ ಶ್ರೀಜ್ಞಾನ ಯೋಗಾಶ್ರಮದ ಶ್ರೀ ಸಿದ್ದೇಶ್ವರ ಸ್ವಾಮಿಜಿಯವರ ಬಗ್ಗೆ ಅಪಾರ ಭಕ್ತಿ, ಅಲ್ಲದೆ ಜೀವನದ ನೋವನ್ನು ಶ್ರೀ ಸಿದ್ದೇಶ್ವರರ ಆಶೀರ್ವಾದ ಕಳೆಯುವುದು ಎಂಬ ದೃಢನಂಬಿಕೆ ತಮ್ಮೆರಡು ವಚನಗಳಲ್ಲಿ ಅವರನ್ನು ಭಕ್ತಿಭಾವದಿಂದ ಸ್ಮರಿಸಿದ್ದಾರೆ. ಅನ್ನಪೂರ್ಣ ಸತ್ಸಂಗ ಪ್ರಿಯರು. ಬಹುದಿವಸಗಳಿಂದ ಪ್ರತಿ ಗುರುವಾರ ತಮ್ಮ ಮನೆಯಲ್ಲಿ ಸತ್ಸಂಗವನ್ನು ಏರ್ಪಡಿಸುತ್ತಿರುವವರು. ಬಹುಶಃ ಅದರ ಪರಿಣಾಮವೋ ಏನೋ ಅವರ ಅನೇಕ ವಚನಗಳು ಸತ್ಸಂಗದ ಹಿರಿಮೆ ಗರಿಮೆಗಳನ್ನು ಎತ್ತಿ ಹೇಳುತ್ತವೆ. "ಸತ್ಸಂಗದಿಂದ ಉದಿಸಿದ ಜ್ಞಾನಾಗ್ನಿ ಅವಗುಣಗಳ ಸುಡುದಿಪ್ಪುದೇ ದೇವನಾಗದಿರುವನೇ?" ಇತ್ಯಾದಿ ಮಾತುಗಳು ಅವರ ಮನದಾಳದ ಅಭಿಪ್ರಾಯವನ್ನು ಹೊರಹೊಮ್ಮಿಸಿದೆ.

ಶರಣಸತಿ–ಲಿಂಗಪತಿ ಭಾವದ ವಚನಗಳೂ ಅಲ್ಲಲ್ಲಿ ಮೂಡಿಬಂದಿವೆ. ಚಿಕ್ಕದಾದರೂ ಚೊಕ್ಕದಾದ ರೀತಿಯಲ್ಲಿ ವಚನ ರೂಪದಲ್ಲಿ ತಾವು ಹೇಳುವ ವಿಷಯವನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಅಲ್ಲೆಲ್ಲಾ ಅವರ ಭಾವದ ತುಡಿತ ಎದ್ದುಕಾಣುತ್ತದೆ. ಹೀಗೆ ಆನಂದ ಸಿಂಧುವಿನಲ್ಲಿ ಒಂದಾಗ ಹೊರಟ ಅವರ ಮಾನಸಿಕ ಸ್ಥಿತಿ ಪಕ್ವಗೊಂಡು ಜಾಗೃತ ಸ್ವಪ್ನ, ಸುಷುಪ್ತಿಯಲ್ಲಿಯೂ ಆತನೊಡನೆ ಒಂದಾಗಲು ಮುಂದಾಗಿದ್ದಾರೆ. ಅವರೇ ಹೇಳುವಂತೆ.

"ಒಮ್ಮೆ ಎಚ್ಚರವಾಗೆ
ಉಸಿರಾಟದಲ್ಲೇ ಓಂಕಾರ
ನಾದವನು ಕೇಳಿ ನಾಬೆರಗಾದೆ
ಹೊರ ಒಳಗೆಲ್ಲೆಲ್ಲೂ ತುಂಬಿ
ಮೊಳಗುತಿದೆ ಓಂಕಾರನಾದ ಆನಂದಸಿಂಧು"

(ಆನಂದಸಿಂಧು, ಅನ್ನಪೂರ್ಣ)

ಅನ್ನಪೂರ್ಣ ಅವರ ಬಹುಪಾಲು ವಚನಗಳು ವಚನಕಾರರ ಪಡಿನೆಳಲಾಗಿ ಕಂಡರೂ ಅಲ್ಲೆಲ್ಲಾ ಸ್ವಂತಿಕೆಯನ್ನು ಮೆರೆದಿದ್ದಾರೆ. ಅವರ ವಚನಗಳ ಶೈಲಿ, ಸರಳ ಹಾಗೂ ಸುಂದರ ಭಾಷೆಯಲ್ಲಿ ಬಿಗಿನೆಲೆಗೊಂಡರೆ ಓದುಗರಲ್ಲಿ ಇನ್ನೂ ಹೆಚ್ಚಿನ ಪ್ರಭಾವ, ಪ್ರೇರಣೆ ಉಂಟಾಗದೇ ಇರಲಾರದು. ಅವರ ಮೊದಲ ವಚನ ಸಂಕಲನ. ಇದಾದರೂ ಅತ್ಯಂತ ಆಸಕ್ತಿಯಿಂದ ಓದಿಕೊಂಡು ಹೋಗುವ ಶಕ್ತಿಯನ್ನು ಹೊಂದಿದೆ. ಇದನ್ನು ನೋಡಿದರೆ ಅವರು ಉತ್ತಮ ವಚನಕಾರ್ತಿಯೆಂದು ಹೇಳಬಹುದು.

**೬) ಪ್ರೊ. ಕೆ.ಆರ್.ಪ್ರೇಮಲೀಲಾ :** ಆಧುನಿಕ ವಚನಕಾರರ ಸಾಲಿನಲ್ಲಿ ಒಂದು ಆಶಾದಾಯಕ ಹೆಸರು ಪ್ರೊ. ಕೆ.ಆರ್.ಪ್ರೇಮಲೀಲಾ ಅವರದು. ಆಧುನಿಕ ವಚನಕಾರ್ತಿಯರಲ್ಲಿ ಇವರು ಅಗ್ರಗಣ್ಯರಾಗಿದ್ದಾರೆ. ಇವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಜೆ.ಎಸ್.ಎಸ್. ಶಿಕ್ಷಣ ಸಂಸ್ಥೆಯಲ್ಲಿ ಸಂಸ್ಕೃತ ಪ್ರಾಧ್ಯಾಪಕಿಯಾಗಿರುವ ಇವರು ಬಿ.ಎ. ಮತ್ತು ಎಂ.ಎ. ಪದವಿಗಳೆರಡರಲ್ಲೂ ಪ್ರಥಮ ರ್‍ಯಾಂಕ್ ಗಳಿಸಿ ಐದು ಸುವರ್ಣ ಪದಕಗಳನ್ನು ಪಡೆದುಕೊಂಡಿದ್ದಾರೆ. ಇವರು ತುಮಕೂರು ಜಿಲ್ಲೆಯ ಕುಣಿಗಲ್‌ನಲ್ಲಿನ ಶ್ರೀ ಕೆ.ಎ.ರೇವಣ್ಣ ಸಿದ್ದಪ್ಪ ಮತ್ತು ಶ್ರೀಮತಿ ಬಿ.ಎ.ಗೌರಮ್ಮನವರ ಪ್ರೀತಿಯ ಪುತ್ರಿ.

ಇಂಗ್ಲಿಷ್ ಎಂ.ಎ. ಸ್ನಾತಕೋತ್ತರ ಡಿಪ್ಲೊಮಾ ಇನ್ ಇಂಗ್ಲಿಷ್ ಪದವಿಯನ್ನು ಪಡೆದಿರುವ ಪ್ರೇಮಲೀಲಾರವರು. ರಾಜ್ಯ ಮತ್ತು ರಾಷ್ಟ್ರೀಯ ಚದುರಂಗ ಮತ್ತು ಟೇಬಲ್ ಟೆನಿಸ್ ವಾರ್ಸಿಟಿ ಆಟಗಾರ್ತಿಯಾಗಿಯೂ ಎನ್.ಸಿ.ಸಿ. ಮತ್ತು ಎನ್.ಎಸ್.ಎಸ್.ನಲ್ಲಿಯೂ ಸೇವೆಸಲ್ಲಿಸಿದ್ದಾರೆ. ಅಲ್ಲದೆ ಇವರು ಕವನಗಳ, ಚುಟುಕಗಳ ಮತ್ತು ಆಧುನಿಕ ವಚನಗಳ ರಚನೆಯಲ್ಲಿ ತಮ್ಮನ್ನು ತಾವು

ತೊಡಗಿಸಿಕೊಂಡಿದ್ದಾರೆ. ಅನೇಕ ರಾಜ್ಯಮಟ್ಟದ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಈಗಾಗಲೇ ಇವರು ರಚಿಸಿರುವ 'ಭಾವಯಾನ' ಮತ್ತು 'ಮಿಂಚುಗಳು' ಬಹಳ ಜನಪ್ರಿಯತೆಯನ್ನು ಪಡೆದುಕೊಂಡಿವೆ. 'ಭಾವಯಾನ' ಕನ್ನಡ ಸಾಹಿತ್ಯ ಪರಿಷತ್ತು ನೀಡುವ ರತ್ನಮ್ಮದತ್ತಿ ಪ್ರಶಸ್ತಿಯನ್ನು ಪಡೆದಿವೆ. ಇವರ ಹಾಸ್ಯಲೇಖನವೊಂದಕ್ಕೆ ಬೀಚಿ ಪ್ರಶಸ್ತಿ ದೊರೆತಿದೆ. ಈಗ ಇವರು 'ಕಾವ್ಯಾಂಬರ' ಮತ್ತು 'ಪ್ರೇಮಾಂಜಲಿ' ಎನ್ನುವ ಕೃತಿಗಳನ್ನು ಹೊರತಂದಿದ್ದಾರೆ.

ಈಗ ಇವರು ವಿಮರ್ಶಾ ಲೇಖನಗಳ ಸಂಚಯವಾದ, 'ಸಾಹಿತ್ಯ ಮೋದ' ಎಂಬ ಕೃತಿಯ ಮೂಲಕ ವಿಮರ್ಶಾಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ್ದಾರೆ. ಪ್ರೇಮಲೀಲಾ ಅವರು ಇಲ್ಲಿನ ಕೆಲವು ವಚನಗಳ ಮೂಲಕ ಆತ್ಮಾವಲೋಕನ ಮಾಡಿಕೊಂಡು ಸಹೃದಯ ಓದುಗರನ್ನೂ ಸಹ ಆತ್ಮಾವಲೋಕನಕ್ಕೆ ಈಡುಮಾಡಿ ಸಮಾಜಮುಖಿಯಾಗಿಸಿದ್ದಾರೆ. ಈ ದೃಷ್ಟಿಯಿಂದ ಈ ವಚನಸಂಕಲನ ಸಾರ್ಥಕತೆ ಪಡೆದುಕೊಂಡಿದೆ.

ಶರಣರ ವಚನಗಳಂತೆ ಇವರ ವಚನಗಳಲ್ಲೂ ಮೃದುನುಡಿ, ಸದ್ವಿನಯಗಳನ್ನು ನಾವು ಕಾಣಬಹುದಾಗಿದೆ. ಅಲ್ಲದೆ, ಅಂತರಂಗ, ಬಹಿರಂಗ ಶುದ್ಧಿಯ ಹಂಬಲವನ್ನು ಕಾಣಬಹುದು. ಪ್ರಾಮಾಣಿಕತೆ ಮತ್ತು ಪಾರದರ್ಶಕತೆ ಇಲ್ಲಿನ ವಚನಗಳ ಜೀವನಾಡಿಯಾಗಿದೆ.

ಶ್ರೀಮತಿ ಪ್ರೇಮಲೀಲಾ ಅವರಿಗೆ ವಚನ ಪ್ರಕಾರದ ಮೇಲೆ ಹಿಡಿತವಿದೆ. ಕೆಲವು ವಚನಗಳಲ್ಲಿ ಸಾಮಾಜಿಕ, ಸಮಕಾಲೀನ ಪ್ರಜ್ಞೆಯಿಂದ ಹಾಸ್ಯ, ಹಾಸ್ಯ ವಿಡಂಬನೆಗಳ ರಂಗಿದೆ. ಅಂತರಂಗದರ್ಶನದಲ್ಲಿ ಭಾವಪೂರ್ಣತೆಯಿದ್ದರೆ ಸಮಾಜ ನಿರೀಕ್ಷಣೆಯಲ್ಲಿ ವೈಚಾರಿಕತೆಯ ಮಿಂಚುಗಳಿವೆ. ಅನುಭಾವದೆತ್ತರದ ಎದೆಯಾಳದ ಭಾವಸ್ಫುರಣೆ ಹೃದಯಂಗಮವಾಗಿ ಇಲ್ಲಿ ಹೊರಹೊಮ್ಮಿದೆ. ಅಂತರಂಗದ ಉನ್ನತಿಗೆ ಪೋಷಕವಾದ ನುಡಿಮುತ್ತುಗಳು ಇಲ್ಲಿವೆ. ಈ ನಿಟ್ಟಿನಲ್ಲಿ ವಚನಸಾಹಿತ್ಯಕ್ಕೆ 'ಪ್ರೇಮಾಂಜಲಿ' ಒಂದು ಮಹತ್ವದ ಸತ್ವಪೂರ್ಣ ಉತ್ತಮ ಕೊಡುಗೆಯಾಗಿದೆ.

ಪ್ರೊ. ಕೆ.ಆರ್.ಪ್ರೇಮಲೀಲಾ ಅವರು ಸಮಕಾಲೀನ ವಿಷಯಗಳನ್ನು ಮತ್ತು ವಿಪರ್ಯಾಸಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ತಮ್ಮ ವಚನಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಇಲ್ಲಿಯ ವಚನಗಳು ಚಿಂತನೆಗೆ ಗ್ರಾಸನೀಡುತ್ತವೆ. ವಚನಕಾರ್ತಿಯರ ಬಗ್ಗೆ ಮೆಚ್ಚುಗೆ ಮೂಡುತ್ತದೆ. ಅನೇಕ ವಚನಗಳಲ್ಲಿ ಭಾವಗೀತೆಯ ಗುಣ ಹಾಸುಹೊಕ್ಕಾಗಿದೆ. ವಚನಗಳನ್ನು ಜನಪ್ರಿಯಗೊಳಿಸುವ ದಿಸೆಯಲ್ಲಿ ಇದು ಒಂದು ಗುಣಾತ್ಮಕ ಅಂಶವಾಗಿದೆ. ಕೃತಿಯ ಎಲ್ಲಾ ಲೇಖನಗಳಲ್ಲಿ ಶ್ರದ್ಧೆ ಆಸಕ್ತಿಗಳು ಎದ್ದು

ಕಾಣಿಸುತ್ತವೆ. ಶೈಲಿ, ಸುಲಭ, ಸುಲಲಿತ, ಸರಳವಾಗಿವೆ. ನಾಟಕ, ಕಾದಂಬರಿ, ಕಾವ್ಯ, ಚುಟಕ ವಚನ, ಮುಕ್ತಕ ಹಾಗೂ ಅನುಭಾವಗೀತೆ - ಒಂದೊಂದು ಕೃತಿಯನ್ನು ಆಯ್ಕೆ ಮಾಡಿಕೊಂಡು ಲೇಖನಗಳನ್ನು ಬರೆದಿದ್ದಾರೆ. ರಸ ವಿಮರ್ಶೆ ಮಾದರಿಯ ಇಲ್ಲಿನ ಲೇಖನಗಳು ಸಹೃದಯರನ್ನು ಮೂಲ ಕೃತಿಗಳನ್ನು ಅಧ್ಯಯನ ಮಾಡುವಂತೆ ಪ್ರೇರೇಪಿಸುತ್ತವೆ.

## ೫. ವಚನಗಳ ವಿಶಿಷ್ಟತೆ:

ಆಧುನಿಕ ವಚನ ಸಾಹಿತ್ಯ ತನ್ನದೇ ಆದ ಹಲವು ವೈವಿಧ್ಯತೆಗಳನ್ನು ಹಾಗು ವಿಶಿಷ್ಟತೆಗಳನ್ನು ಒಳಗೊಂಡಿದೆ. ಅದು ಜೀವನದ ವಿವಿಧ ಆಯಾಮಗಳನ್ನು ಅನಾವರಣಗೊಳಿಸಿದೆ. ಅಲ್ಲದೆ ಹೊಸ ಹೊಸ ಚಿಂತನೆ ಹಾಗು ಆಲೋಚನೆಗೆ ದಾರಿ ಮಾಡಿಕೊಟ್ಟಿದೆ. ಬದುಕಿನ ವಿವಿಧ ಸ್ತರಗಳಲ್ಲಿ ಜೀವನದ ವಿವಿಧ ಸಂದರ್ಭಗಳಲ್ಲಿ ಮನುಷ್ಯನಿಗೆ ಎದುರಾಗುವ ಅನೇಕ ತೊಂದರೆಗಳು, ಸಮಸ್ಯೆಗಳು, ಜಟಿಲತೆಗಳು ಹಾಗೂ ಸಂಕೀರ್ಣತೆಗಳ ಕಡೆಗೆ ಗಮನಹರಿಸಲಾಗಿದೆ. ಅಂದರೆ ಜೀವನದ ಸವಾಲುಗಳ ಬಗ್ಗೆ ನಮ್ಮ ಗಮನವನ್ನು ಸೆಳೆಯಲಾಗಿದೆ.

ಆಧುನಿಕ ಸಮಾಜದ ಪ್ರಗತಿಗೆ ಕಂಟಕ ಪ್ರಾಯವಾಗಿರುವ ದುಷ್ಕೃತ್ಯಗಳು ಹಾಗೂ ಸಮಾಜಬಾಹಿರ ಚಟುವಟಿಕೆಗಳು, ಅಕ್ರಮಗಳು ಹಾಗೂ ಅದರಲ್ಲಿ ತೊಡಗಿರುವ ಮನುಷ್ಯರ ಸ್ವಾರ್ಥ ಸಾಧನೆಗಳ ನೈಜನೆಯನ್ನು ಎಳೆಎಳೆಯಾಗಿ ವಿವರಿಸಲಾಗಿದೆ. ಅಲ್ಲದೆ ಸಮಾಜದಲ್ಲಿ ದಿನನಿತ್ಯ ನಡೆಯುತ್ತಿರುವ ಕೊಲೆ, ಸುಲಿಗೆ, ಅನ್ಯಾಯ, ಅಕ್ರಮ, ದಬ್ಬಾಳಿಕೆ, ದೌರ್ಜನ್ಯ, ಹಗಲುದರೋಡೆ, ಅತ್ಯಾಚಾರಗಳು, ಭ್ರಷ್ಟಾಚಾರಗಳು, ಅನಾಚಾರಗಳು ಹಾಗೂ ಸ್ತ್ರೀಯರ ಮೇಲಿನ ಲೈಂಗಿಕ ಕಿರುಕುಳ, ಹೆಣ್ಣುಭ್ರೂಣಹತ್ಯೆ ಜಾತಿಭೇದ, ಲಿಂಗಭೇದ, ಧರ್ಮಭೇದಗಳು ಮತ್ತು ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಪ್ರತಿನಿತ್ಯ ನಡೆಯುತ್ತಿರುವ ಕಂದಾಚಾರಗಳು, ಗೊಡ್ಡುಸಂಪ್ರದಾಯಗಳು ಮುಂತಾದ ಹತ್ತು ಹಲವು ವೈವಿಧ್ಯಮಯವಾದ ಅಂಶಗಳನ್ನು ಇದು ಒಳಗೊಂಡಿದೆ. ಆಧುನಿಕ ವಚನ ಸಾಹಿತ್ಯದ ಕೆಲವು ವಿಶಿಷ್ಟತೆಗಳನ್ನು ಕುರಿತು ಈ ಮುಂದಿನಂತೆ ಚರ್ಚಿಸಲಾಗಿದೆ.

### ೧) ಆಧ್ಯಾತ್ಮಿಕ ಚಿಂತನೆ

**೧. ಶರಣಸತಿ ಲಿಂಗಪತಿ:** ಹನ್ನೆರಡನೇ ಶತಮಾನ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಒಂದು ಮೌಲಿಕ ಘಟ್ಟ ಕಾವ್ಯವಹಿನಿ ಶ್ರೀಸಾಮಾನ್ಯನ ಸನಿಹಕ್ಕೆ ಬಂದ ಕಾಲವದು. ಶಿವಶರಣರು ತಮ್ಮ ಅನುಭವಗಳನ್ನು ಆಧ್ಯಾತ್ಮಿಕ ನೆಲೆಗಟ್ಟಿನ ಸ್ತರದಿಂದ ಸಹಜಗೊಳಿಸಿರುವುದು ಮುಖ್ಯ. ಪುರುಷನಿಗೆ ಹೆಗಲೆಣೆಯಾಗಿ ಅನುಭಾವದ ಹಂತವನ್ನೇರಿ ಕಲಾತ್ಮಕವಾಗಿ ನಿರ್ವಹಿಸುವ ಪರಿಭಾವಪೂರ್ಣವಾಗಿದೆ. ಆತ್ಮೋದ್ಧಾರದ ಹಂಬಲ, ಅದ್ವೈತ ಭಾವವನ್ನು ಶಿಶರಣೆಯರ ವಚನಗಳಲ್ಲಿ ಕಾಣಬಹುದು. ಪ್ರಕೃತಿಯಲ್ಲಿ ಸಹಜವಾಗಿ ವೈವಿಧ್ಯತೆ ಇರುವುದಾದರೂ ಒಂದಾಗಿ ತೋರುವಂತೆ ತನ್ನೊಳಡಗಿದ ಅಂಶಗಳಿಂದ ಭೇದವೆಣಿಸದ ಭಾವಸಂಗಮವಿದೆ. ಪರಿಬೇರೆಯಾದರೂ ಅನುಭಾವ ಯೋಗ ಒಂದೇ ಎಂಬ ತತ್ವ ಪ್ರಕೃತ ವಚನಗಳಲ್ಲಿ

ಸುವ್ಯಕ್ತವಾಗಿದೆ. ಇವು ಅನುಭಾವ ಸಂಗಮವೆನಿಸಿವೆ. ಶರಣಸತಿಲಿಂಗಪತಿಭಾವ - ಅನುಭಾವ ತೀವ್ರತೆಯ ಉತ್ಕರ್ಷದಿಂದಾಗಿ ವ್ಯಕ್ತಿತ್ವದ ಭಾಷ್ಯದಂತೆ ವಚನಗಳು ರೂಪಿತವಾಗಿವೆ.

ಮಹಿಳೆಯರನ್ನು ಕೀಳಾಗಿ ಕಾಣುತ್ತಿದ್ದ ಸಂದರ್ಭದಲ್ಲಿ ವಚನಕಾರ್ತಿಯರು ಸ್ತ್ರೀಪರವಾದ ನಿಲುವುಗಳನ್ನು ತೆಗೆದುಕೊಳ್ಳುವುದರ ಮೂಲಕ ಸ್ತ್ರೀಸಮುದಾಯಕ್ಕೆ ವರವಾಗಿ, ಗುರುವಾಗಿ ವಚನಕಾರರು ಹೆಣ್ಣನ್ನು ಗಂಡಿನ ಮಟ್ಟಕ್ಕೆ ಮಾತ್ರವಲ್ಲ ಇನ್ನು ಎತ್ತರಕ್ಕೆ ಏರಿಸಿದ್ದು ಆಧುನಿಕ ವಚನ ಧರ್ಮದ ಶ್ರೇಷ್ಠತೆಗೆ ಒಂದು ನಿದರ್ಶನವಾಗಿದೆ. ಸ್ತ್ರೀಯರಿಗೂ ಪುರುಷರಂತೆ ಉದ್ಧಾರದ ಹಕ್ಕುಂಟು ಎಂಬುದನ್ನು ಆಧುನಿಕ ವಚನಕಾರ್ತಿಯರು ಸಮಾಜಕ್ಕೆ ಸಾರಿ ಹೇಳಿದರು. ಅಲ್ಲದೆ ಒಂದು ಹೆಜ್ಜೆ ಮುಂದೆ ಹೋಗಿ ಅವಳು ಪುರುಷರನ್ನು ಸಹ ಉದ್ಧಾರ ಮಾಡಬಲ್ಲಳು ಎಂಬುದನ್ನು ಹೇಳುವ ಮೂಲಕ ಗಂಡಿನಮಟ್ಟಕ್ಕಿಂತ ಹೆಚ್ಚಿನ ಗೌರವ ಸ್ಥಾನಮಾನಗಳನ್ನು ನೀಡಿದರು. ಆದ್ದರಿಂದ ಲಿಂಗಭೇದ ಮತ್ತು ಸ್ತ್ರೀ ಸಮಾನತೆ ಹಾಗೂ ಸ್ತ್ರೀ ಸ್ವಾತಂತ್ರ್ಯದ ರುವಾರಿಗಳಾಗಿದ್ದಾರೆ. ಶರಣೆಯರ ಈ ಪುನರುತ್ಥಾನಕ್ಕೆ ಶರಣ ಸತಿ ಲಿಂಗ ಪತಿ ಪರಿಕಲ್ಪನೆಯ ಭಾವವೂ ಪ್ರೇರಕ ಮತ್ತು ಪೂರಕವಾಗಿದೆ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ.

ವಚನಕಾರರು ಸ್ತ್ರೀಯರ ಬಗ್ಗೆ ತಾಳಿದ ನಿಲುವು ಗೌರವ ಪೂರ್ಣವಾದುದು. ಅವಳು ಕೇವಲ ಗೃಹಕೃತ್ಯಕ್ಕೆ ಮಾತ್ರ ಮೀಸಲಾದವಳು ಹಾಗೂ ಕೇವಲ ಭೋಗ ಸಾಮಗ್ರಿ ಎಂಬ ಭಾವನೆಯಿದ್ದ ಸಮಾಜದಲ್ಲಿ ಸ್ತ್ರೀಯರಿಗೂ ಪುರುಷನಷ್ಟೇ ಲೌಕಿಕ, ಧಾರ್ಮಿಕ, ಆಧ್ಯಾತ್ಮಿಕ, ಗೌರವ, ಸ್ಥಾನಮಾನಗಳನ್ನು ಒದಗಿಸಿದರು. ಅನುಭವ ಮಂಟಪದಲ್ಲಿ ಸ್ತ್ರೀಪುರುಷ ಭೇದಭಾವವಿಲ್ಲದೆ ಎಲ್ಲರೂ ಸರಿಸಮಾನವಾಗಿ ಭಾಗವಹಿಸುವ ವಾತಾವರಣವನ್ನು ಕಟ್ಟಿದರು. ಗಂಡು-ಹೆಣ್ಣಿನ ನಡುವೆ ಕೇವಲ ದೈಹಿಕ ಅಂತರ ಮಾತ್ರ ಎಂದು ಸಾರಿ ಹೇಳಿದರು.

**೨. ಆತ್ಮಕ್ಕೆ ಲಿಂಗಭೇದವಿಲ್ಲ:** ಶರಣರು ಸ್ತ್ರೀಯರ ಕಾರ್ಯಕ್ಷೇತ್ರವನ್ನು ಸಾಮಾಜಿಕ ನೆಲೆಯಿಂದ ಧಾರ್ಮಿಕ ನೆಲೆಗೂ ವಿಸ್ತರಿಸಿದರು. ಸ್ತ್ರೀಯರಿಗೆ ಸಮಾನ ಅವಕಾಶ ನೀಡಿದ ಕಾರಣ ಸ್ತ್ರೀ ಪುರುಷರ ಭೇದ ನಿವಾರಣೆ ಸಾಧ್ಯವಾಯಿತು. ಆತ್ಮಕ್ಕೆ ಲಿಂಗಭೇದವಿಲ್ಲ ಎಂಬುದು ಶರಣರು ಘೋಷಿಸಿದ ಸಮಾನತೆಯಿಂದ ಸ್ತ್ರೀಯರನ್ನು ತಾರತಮ್ಯ ಭಾವನೆಯಿಂದ ನೋಡುವುದು ತಪ್ಪಿತು. ದೈಹಿಕ ವ್ಯತ್ಯಾಸ ಅವಗಣನೆ ಪಡೆಯಿತು. ಗಂಡು-ಹೆಣ್ಣುಗಳ ನಡುವೆ ಸುಳಿವಾತ್ಮ ಗಂಡೂ ಅಲ್ಲ ಹೆಣ್ಣೂ ಅಲ್ಲ ಎಂಬ ಆತ್ಮದ ಅಭೇದವನ್ನು ಶರಣರು ಗುರುತಿಸಿ ಎತ್ತಿ ಹೇಳಿದರು.

"ಮಲೆಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ಈ ಉಭಯ ಜ್ಞಾನ ಹೆಣ್ಣೋ-ಗಂಡೋ
ನಾಸ್ತಿನಾಥ ಎಂದು ಶರಣೆ ಗೊಗ್ಗವ್ವೆ ಹೇಳಿದ್ದಾರೆ"

(ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ-ದೇಜಗೌ, ಪು. ೯೭)

ಜ್ಞಾನವು ಹೆಣ್ಣು-ಗಂಡು ಎಂದು ಒಲಿಯುವುದಿಲ್ಲ ಎಂಬ ಸಮಾನ ನೀತಿಯನ್ನು ಹೇಳಿದ್ದಾಳೆ. ಶರಣರು ನೀಡಿದ ಸಮಾನತೆಯ ಕಾರಣದಿಂದ ತಮ್ಮ ವಿಚಾರ ಪರತೆಯಿಂದ ಸಾಮಾನ್ಯಳಾದರೂ ತನ್ನ ವೈಚಾರಿಕ ನಿಲುವಿನಿಂದ ಕಂಗೊಳಿಸುವ ಶರಣೆ ಸತ್ಯಕ್ಕನದು, ಹೆಣ್ಣಾಗಲಿ, ಗಂಡಾಗಲಿ ಅವರವರ ಸಾಧನೆಯ ಪರಿಮಳದಿಂದ ಶೋಭಿಸುತ್ತಾರೆ ಎಂಬ ನಿಯಮವನ್ನು ಈ ರೀತಿ ತನ್ನ ವಚನದಲ್ಲಿ ದಾಖಲೆಪಡಿಸಿದ್ದಾಳೆ.

"ಮಲೆಮುಡಿ ಇದ್ದೆಡೆ ಹೆಣ್ಣೆಂದು ಪ್ರಮಾಣಿಸಲಿಲ್ಲ
ಗಂಡ-ಮೀಸೆ ಕಠಾರವಿದ್ದಡೆ ಗಂಡೆಂದು ಪ್ರಾಮಾಣಿಸಲಿಲ್ಲ
ಅದು ಜಗದ ಹಾಗೆ ಬಲ್ಲವರ ನೀತಿಯಲ್ಲ
ಏತರದ ಹಣ್ಣಾದರೂ ಮಧುರವೇ ಕಾರಣ"

ಹೀಗೆ ಶರಣರು ಚಿಂತನಶೀಲತೆಗೆ ಅವಕಾಶ ನೀಡಿದ್ದರಿಂದ ಬಹಳಷ್ಟು ಶರಣೆಯರು ವಚನಗಾರ್ತಿಯರಾಗಿ ತಮ್ಮ ನಿಲುವನ್ನು ಪ್ರತಿಪಾದಿಸಿದರು. ಇಂತಹ ಪರಿವರ್ತನೆ ಸಾಧ್ಯವಾದದು ಈ ವಚನಕಾರರಿಂದ. ಹೀಗೆ ಇಡೀ ಜಗತ್ತೇ ಅಜ್ಞಾನ ಮೌಢ್ಯದ ಅಂಧಕಾರದಲ್ಲಿ ತೊಳಲಾಡುತ್ತಿರುವ ಸಂದರ್ಭದಲ್ಲಿ ಅವಳನ್ನು ಸ್ವಾತಂತ್ರ್ಯದ ಸಿಂಹಾಸನಕ್ಕೇರಿಸಿದ್ದು ರೋಮಾಂಚಕ ಹಾಗೂ ಅದ್ಭುತ ಘಟನೆಯೆಂದೇ ಹೇಳಬೇಕು. (ವಿಶ್ವ ಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ- ದೇಜಗೌ-ಪು.೯೭)

ಗಂಡು ಮತ್ತು ಹೆಣ್ಣು ಮೂಲಭೂತವಾಗಿ ಇಬ್ಬರೂ ಒಂದೇ ಎಂಬ ಸತ್ಯವನ್ನೇ ವಚನ ಸಾಹಿತ್ಯದಲ್ಲಿ ದಾಖಲುಪಡಿಸಿದರು. ಬಸವಣ್ಣನವರಿಗಿಂತಲೂ ಹಿಂದೆಯೇ ಇದ್ದ ಆದ್ಯ ವಚನಕಾರ ಎನಿಸಿರುವ ಜೇಡರದಾಸಿಮಯ್ಯನ ಈ ವಚನ ಸ್ತ್ರೀ ಸಮಾನತೆಯನ್ನು ದಾಖಲುಪಡಿಸಿದ್ದು ಗಮನಾರ್ಹ ಸಂಗತಿಯಾಗಿದೆ.

"ಮಲೆಮುಡಿ ಬಂದರೆ ಹೆಣ್ಣೆಂಬುದು
ಗಡ್ಡಮೀಸೆ ಬಂದರೆ ಗಂಡೆಂಬರು
ಈ ಒಳಗೆ ಸುಳಿವಾತ್ಮ ಹೆಣ್ಣು ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ"

ಒಳಗೆ ಸುಳಿವಾತ್ಮ ಹೆಣ್ಣು ಅಲ್ಲ ಗಂಡೂ ಅಲ್ಲ ಎಂದಿರುವಲ್ಲಿ, ಜೀವಿಗಳಿಗೆ ಶಾರೀರಿಕ ವ್ಯತ್ಯಾಸವೇ ಹೊರತು ಲಿಂಗಭೇದವಿಲ್ಲ ಅಂದರೆ ಸ್ತ್ರೀ ಪುರುಷರಲ್ಲಿ ದೈಹಿಕ ವ್ಯತ್ಯಾಸ ಪ್ರಕೃತಿಯ ವ್ಯತ್ಯಾಸವಾಗಿದೆ. ಅದು ಪ್ರಕೃತಿಯ ನಿಯಮವಾಗಿದೆ. ಅಷ್ಟೇ ಹೊರತು ಉಳಿದಂತೆ ಇಬ್ಬರೂ ಪರಸ್ಪರ ಸಮಾನರು ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ.

**೩. ಧಾರ್ಮಿಕ ಸ್ವಾತಂತ್ರ್ಯ:** ಧಾರ್ಮಿಕ ಜೀವನ ಮತ್ತು ಆಧ್ಯಾತ್ಮಿಕ ಸಾಧನೆಗಳಿಗೆ ಗೃಹಸ್ಥಜೀವನವು ಸೋಪಾನ ಅನುಕೂಲಕರ ಎಂಬುದು ಬದುಕಿನ ಬಗೆಗೆ ಶರಣರು ತಳೆದ ಸಾರ್ಥಕ ನಿಲುವು. ಈ ನಿಲುವು ಸ್ತ್ರೀಯರನ್ನು ಕೀಳಾಗಿ ಕಾಣಲು ಕಾರಣವಾಗಿದ್ದ ಅನೇಕ ತಪ್ಪು ಕಲ್ಪನೆಗಳನ್ನು ನಂಬಿಕೆಗಳನ್ನು ನಿವಾರಿಸಿ ಧಾರ್ಮಿಕ ಬದುಕು ಸ್ತ್ರೀಯರಿಗೂ ಅವಶ್ಯವೆಂದು ಸಮಾನ ಸ್ಥಾನ ನೀಡಿದ್ದರಿಂದ ಅನೇಕ ಶಿವಶರಣರೇ ಅವತರಿಸಿದರೆಂದು ಹೇಳಬಹುದು. 'ಯತ್ರನಾರ್ಯಸ್ತು ಪೂಜ್ಯಂತೇರಮಂತೆ ತತ್ವ ದೇವಿತಃ' ಎಂಬ ಮನುವಿನ ವಾಣಿ ಸಮಾನತೆಗೂ ಮೀರಿದ ಉನ್ನತಿಸ್ಥಾನದಲ್ಲಿ ವಚನಕಾರರಲ್ಲಿ ಸಾರ್ಥಕತೆ ಪಡೆಯಿತು. ಅನುಭವ ಮಂಟಪದಲ್ಲಿ ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ಸುಮಾರು ಏಳುನೂರ ಎಪ್ಪತ್ತು ಶರಣರ ನಡುವೆ ಸುಮಾರು ಎಪ್ಪತ್ತು ಮಂದಿ ಶಿವಶರಣೆಯರು ಸಮಾನವಾಗಿ ಕುಳಿತು ಆಧ್ಯಾತ್ಮಿಕ ಚರ್ಚೆಗಳಲ್ಲಿ ಭಾಗಿಯಾಗುತ್ತಿದ್ದ ಎರಡು ಐತಿಹಾಸಿಕವಾಗಿ 'ನಭತೋನಭ ವಿಷ್ಯತಿ' ಎಂಬಂತೆ ಕಂಡುಬರುತ್ತವೆ.

ಹೆಣ್ಣಿಗೆ ಹಿಂದಿನಿಂದ ಬಂದ ಕೀಳಿರಮೆಯ ಕೊರಗನ್ನು ಹೋಗಲಾಡಿಸಿಕೊಳ್ಳುವುದು ಹೆಣ್ಣು ಎಂಬುದನ್ನು ಮೀರಿ ಬೆಳೆಯುವ ತವಕ, ಆಶಯಗಳು ಈ ವಚನದಲ್ಲಿವೆ.

> "ಏಕೆನ್ನ ಪುಟ್ಟಿಸಿದ್ದಯ್ಯ ಹೆಣ್ಣು ಜನ್ಮದಲ್ಲಿ ಪುಣ್ಯವಿಲ್ಲದ ಪಾಪಿಯ
> ನಾನು ಇಹಪರಕ್ಕೆ ದೂರಳಯ್ಯ
> ಎನ್ನ ನಾಮ ನಾಮವಲ್ಲಯ್ಯ
> ನಾನುಸಿರಿಯಿದ್ದ ಬಸವನ ವಧುವಾದ ಕಾರಣ"
>
> (ಡಾ.ಕೆ.ಎಸ್.ರತ್ನಮ್ಮ ವಚನ ಜ್ಯೋತಿ, ಪು. ೩೦)

'ಎನಗೆ ನಾಮವಿಲ್ಲವಯ್ಯ' ಎಂದು ಹೆಣ್ಣು ಜನ್ಮ ಪಾಪದ್ದು ಎಂಬ ಶತಮಾನಗಳ ಸಂಪ್ರದಾಯಿಕ ಅರ್ಥಹೀನ ನಂಬಿಕೆಯನ್ನು ಕಳೆದುಕೊಳ್ಳುವ ಪ್ರಯತ್ನ ನಡೆಸಿದ್ದಾಳೆ. ತನ್ನನ್ನೇ ಅವಹೇಳನ ದೃಷ್ಟಿಯಿಂದ ಇಹಪರಕ್ಕೆ ದೂರಳು ಎಂದು ನೋಡುತ್ತಿದ್ದ ಹೆಣ್ಣಿಗೆ ತನ್ನ ಗುರುವಿನ ಅಸ್ತಿತ್ವವೇ ಇಲ್ಲದ ಸಮಾಜದಲ್ಲಿ ಹೆಣ್ತನಕ್ಕೆ ಅಂಟದ ಭಾವನೆಗಳ ನೆಲೆಯಿಂದ ಸ್ವಾತಂತ್ರ್ಯವನ್ನು ಅಪ್ಪಿಕೊಂಡು ಮೋಕ್ಷಸಾಧನೆಯ ಎತ್ತರಕ್ಕೆ ಏರಲು ಹೆಣ್ಣು ಎಂಬ ತನ್ನ ಗುರುತನ್ನೇ ನಿರಾಕರಿಸಲು ಸಾಧ್ಯವಾಯಿತು. ಸಾಧನೆಯ ನೆಲೆಯಲ್ಲಿ

ಹೆಣ್ಣುಗಂಡು ಇಬ್ಬರೂ ಸಮಾನರು ಎಂಬ ಅರಿವು ಪಡೆದಳು. ಬಸವಣ್ಣನವರ ಸಾಮಾಜಿಕ, ಧಾರ್ಮಿಕ ಜಾಗೃತಿಯ ಮಹಾ ಕಾರ್ಯಗಳಿಗೆ ನೀಲಲೋಚನೆ, ಸ್ಫೂರ್ತಿದಾಯಿಕಳಾದಳು ತನ್ನದೇ ಆದ ವ್ಯಕ್ತಿತ್ವವನ್ನು ರೂಪಿಸಿಕೊಂಡು 'ಸಂಗಯ್ಯ' ಎಂಬ ಅಂಕಿತದಲ್ಲಿ ವಚನಗಳನ್ನು 'ಸ್ವರವಚನಕಾಲ'ಗಳನ್ನು ರಚಿಸಿದ್ದಾಳೆ ಪತಿಯೇ ಆಧ್ಯಾತ್ಮ ಗುರು ಎಂದು ಸ್ತುತಿಸುವ ಈಕೆ ಹೆಣ್ತನವನ್ನು ಮೀರಿದ ಅತೀತದ ಧ್ವನಿಯಿಂದ ಪರಮಾತ್ಮನ ಮೂಲಕ ಶಾಂತಿ ಪಡೆದು ಅಲೌಕಿಕ ದೃಷ್ಟಿ ಹೊಂದಿದ್ದಾಳೆ. ಕೂಡಲಸಂಗಮಕ್ಕೆ ತೆರಳಿದ್ದ ಬಸವಣ್ಣ ತಮ್ಮ ಪತ್ನಿಯನ್ನು ಅಲ್ಲಿಗೆ ಬರಹೇಳಿ ಹಡಪದ ಅಪ್ಪಣ್ಣನ ಮೂಲಕ ಸೂಚನೆ ಕಳುಹಿಸಿದ್ದಾಗ "ಅಲ್ಲಿಗೆ ಎನ್ನನ್ನು ಬರಹೇಳಿದಂತೆ ಇಲ್ಲಿ ಇತಾಪಿಲ್ಲವೆ ಸಂಗಯ್ಯನು ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು ಬಲ್ಲ ಮಹಾತ್ಮರಿಗಿದು ಗುಣವೇ" ಎಂದು ಉತ್ತರ ನಿವೇದಿಸುವ ಜ್ಞಾನಿಯಾಗಿ ಬೆಳೆದಿರುವುದು ಗಂಡನಿಗೆ ಹೆಂಡತಿಯಾದವಳು, ವಿಚಾರ ಪತ್ನಿ ಆಗಿರಬೇಕು ಎಂಬ ವೈಜ್ಞಾನಿಕ ನಿಲುವು ತಳೆದಿರುವುದು ಸ್ವತಂತ್ರ್ಯ ಚಿಂತನೆಯ ಫಲವಾಗಿದೆ. ಹೀಗೆ ಸತಿಪತಿಗಳೊಂದಾದ ಶಿವಭಕ್ತಿಯಲ್ಲಿನ ಈ ನಿಲುವು ಆಧುನಿಕ ಎನ್ನಬಹುದಾದ ಮೌಲ್ಯವಾಗಿದ್ದು ಅದನ್ನು ಎತ್ತಿ ಹಿಡಿದಿದ್ದಾಳೆ. ವಚನಕಾರರಿಂದ ಸ್ಫೂರ್ತಿ ಪಡೆದ ಶರಣೆಯರು ಅನೇಕ ವಿಚಾರಗಳಲ್ಲಿ ಅಂದಿನ ಶರಣರನ್ನು ಅಥವಾ ತಮ್ಮ ಪತಿಯನ್ನೇ ಅನುಸರಿಸಿರುವುದು ಕಂಡುಬರುತ್ತದೆ. ಆರಂಭದ ಹಂತಗಳಲ್ಲಿ ಸ್ತ್ರೀಯರಲ್ಲಿ ಮನೋಸ್ಥೈರ್ಯ ಹರಳುಗಟ್ಟುವ ಈ ಅವಲಂಬನೆ ಅನಿವಾರ್ಯ.

ಜಾತಿಯ ದೃಷ್ಟಿಯಿಂದ ನಮ್ಮ ಸಮಾಜದಲ್ಲಿ ಪುರುಷರು ಮೇಲು ಸ್ತ್ರೀಯರು ಕೀಳು ಎಂಬ ಭಾವನೆಯಿತ್ತು ತತ್ವದ ನೆಲೆಯಲ್ಲಿ ಗಂಡು ಹೆಣ್ಣಿನ ಸರ್ವಾಂಗೀಣ ಸಮಾನತೆಯನ್ನು ವಚನಕಾರರು ಸಾರಿದ್ದಾರೆ. ತಮ್ಮನ್ನು ಸತಿಸ್ಥಾನದಲ್ಲಿರಿಸಿಕೊಂಡು ಸ್ತ್ರೀಯಾಗಿ ಶರಣಸತಿಭಾವನೆಯನ್ನು ಹೊಂದಿ ಶಿವನನ್ನು ತಮ್ಮ ಪತಿ ಎಂಬ ಭಾವದಲ್ಲಿ ಪೂಜಿಸುವ, ಆರಾಧಿಸುವ ಅರ್ಪಿಸಿಕೊಳ್ಳುವ ನಿಷ್ಠೆ ಸಮರ್ಪಣಾ ಭಾವನೆಗಳಿಗೆ ಮನ್ನಣೆ ನೀಡುವುದು, ನೀಡಿರುವುದು ಸ್ಪಷ್ಟವಾಗಿದೆ.

ಶರಣರ ಪ್ರಕಾರ ಸೃಷ್ಟಿಯಲ್ಲಿರುವ ಪುರುಷರು ದೇವರದೃಷ್ಟಿಯಿಂದ ಹೆಣ್ಣೋ ಆದ್ದರಿಂದ ಶರಣಸತಿ ಲಿಂಗಪತಿ ಎಂಬ ಪರಿಕಲ್ಪನೆ ಅಳವಡಿಸಿಕೊಂಡು ಎಲ್ಲ ಶರಣರು ವೀರಶೈವ ಧರ್ಮದ ತಾತ್ವಿಕ ನೆಲೆಯನ್ನು ರೂಪಿಸಿ ಆಧ್ಯಾತ್ಮದ ಔನ್ನತ್ಯ ಸಾಧಿಸಿದರು. ಈ ದೃಷ್ಟಿಯಿಂದ ಸ್ತ್ರೀಯರಿಗೆ ನೀಡಿದ ಗೌರವ ಗಂಡಿಗಿಂತಲೂ ಮಿಗಿಲಾದದು ಎಂಬುದು ಇಲ್ಲಿ ಗಮನಾರ್ಹ ಸಂಗತಿಯಾಗಿದೆ. ಇದಕ್ಕೆ ಕಾರಣ ಗಂಡು ಜಾತಿ ಮೇಲು ಹೆಣ್ಣು ಜಾತಿ ಕೀಳು ಎಂಬ ಸಾಮಾಜಿಕ ಅಸಮಾನತೆಯ ಭ್ರಮೆ ಅಕ್ಕನಿಗೂ ಇದ್ದು ತಾನು ಹೆಣ್ತನದ ನಿಯಮಗಳನ್ನು ಮೀರಿ ಗಂಡಿನ ರೀತಿ, ನಿರ್ಭೀತಳಾಗಿ, ನಿಸ್ಸಂಕೋಚವಾಗಿ ವ್ಯವಹರಿಸುತ್ತಿದ್ದೇನೆಂಬ

ಧೋರಣೆಯಲ್ಲಿ ಹೆಮ್ಮೆ ಪಟ್ಟಿರಲೂಬಹುದು. ಅದಕ್ಕಾಗಿ ಎನ್ನದೇವ ಚನ್ನಮಲ್ಲಿಕಾರ್ಜುನನೆಂಬ ಗುರುವಂಗೆ ಜಗವೆಲ್ಲಾ ಹೆಣ್ಣುನೋಡಾ' ಎಂಬ ವಿಶೇಷ ಅರಿವು ಪಡೆದ ಜಾಗೃತ ಸ್ತ್ರೀಯಾಗಿ ತಾನು ಅಸಮಾನತೆಯನ್ನು ದೂರಗೊಳಿಸಿಕೊಂಡಿದ್ದೇನೆ ಎಂಬ ಭಾವದಲ್ಲಿ "ಅಣ್ಣಾ ನಾನು ಎಂದೂ ಹೆಂಗಸಲ್ಲ, ನಾಮದಲ್ಲಿ ಹೆಣ್ಣು ರೂಪವಲ್ಲದೆ ಭಾವಿಸಲು ಗಂಡು ರೂಪ ನೋಡಾ ಎಂದು ತನ್ನ ವಚನದಲ್ಲಿ ಆತ್ಮ ಪ್ರತ್ಯಯದಿಂದ ನುಡಿದ ಹೆಣ್ಣನ್ನು ಶರೀರದ ನೆಲೆಯಿಂದ ನೋಡುವವರ ವಿರುದ್ಧ ತಾತ್ವಿಕ ಪ್ರತಿಭಟನೆ ವ್ಯಕ್ತಪಡಿಸಿದ್ದಾಳೆ. ಆದರೆ ಈ ಅರಿವನ್ನು ಮೀರಿ ಬೆಳೆದ ಅಕ್ಕನ ಸಾಧನೆ ತುಂಬಾ ಹಿರಿದು. ಈ ಹಿನ್ನಲೆಯಲ್ಲಿ ಆಧುನಿಕ ವಚನಕಾರ್ತಿಯರೂ ಸಹ ಅಕ್ಕನ ವಿಚಾರಧಾರೆಗಳನ್ನು ಸಂಪೂರ್ಣವಾಗಿ ಒಪ್ಪಿಕೊಂಡಿದ್ದಾರೆ ಹಾಗೂ ಅವಳ ಆದರ್ಶಗಳನ್ನು ತಮ್ಮ ಆಧುನಿಕ ವಚನಗಳಲ್ಲಿ ಎತ್ತಿಹಿಡಿದಿದ್ದಾರೆ. ಒಟ್ಟಾರೆ ಹೆಣ್ಣು ಜಾತಿ, ಗಂಡುಜಾತಿ ಎಂಬ ಅಸಮಾನತೆಯನ್ನು ದೂರವಾಗಿಸುವ ಪ್ರಯತ್ನದ ಇಂತಹ ಜಾಗೃತಿ ಶಿವಶರಣೆಯರಿಂದ ಆಧುನಿಕ ವಚನಕಾರ್ತಿಯವರೆಗೆ ನಡೆದು ಸಮಾನತೆ ನೆಲೆಸಲು ಆಸ್ಪದವಾಯಿತು ಎಂದು ಹೇಳಬಹುದು.

"ಹೆಣ್ಣಲ್ಲದೆ ಜನ್ಮವೀಯುವ ಸೌಭಾಗ್ಯ
ಗಂಡಿಗೊದಗುವದೇ ಅಯ್ಯಾ
ಹೆಣ್ಣಲ್ಲವೇ ವಸುಂದರೇ ಗಂಡು ವಸುಂದರನಾಗಬಲ್ಲನೆ?
ಪುರುಷ ತಾಯ್ತನ ಪಡೆಯಬಲ್ಲನೇ?
ಹೆಣ್ಣಿಗಲ್ಲದೆ ಇನ್ನಾರಿಗಿದೆ ಮಾತೃತ್ವ ಶಕ್ತಿ ಈ ಧರೆಯೊಳು
ಹೆಣ್ಣ ಮೇಲೆ ಖತಿಯಿಂದ ಪಕ್ಷಪಾತವ ಎಸಗುತಿಹ
ಸ್ತ್ರೀ ಪುರುಷರಿಗೆ ಪೆಣ್ಣೆಂಬ ಸತ್ಯವನರಿವ
ಸಮತ್ವ ಕರುಣಿಸು ವಿವೇಕದ ಬೆಳಕ ಹರಿಸೋ ತಂದೆ
ಪ್ರಣವಶ್ರೀ ಪರಂಜ್ಯೋತಿಯೆ"

ಬದುಕಿದ್ದಾಗ ಒಂದು ತುತ್ತು ಅನ್ನಹಾಕಿ ಪ್ರೀತಿಯಿಂದ ನೋಡಿಕೊಳ್ಳದಂತಹ ಇಂದಿನ ಯುವಕರು-ಯುವತಿಯರು, ತಂದೆ-ತಾಯಿಗಳು ಮರಣಹೊಂದಿದ ಮೇಲೆ ಎಲ್ಲಿಯೂ ಇಲ್ಲದಂತಹ ಪ್ರೀತಿ, ವಿಶ್ವಾಸವನ್ನು ತೋರಿಸುತ್ತಾರೆ. ಸಮಾಜದ ಟೀಕೆ-ಟಿಪ್ಪಣಿಗಳಿಗೆ ಹೆದರಿ ಲೋಕ ನಿಂದನೆಗಳಿಂದ ಮುಕ್ತರಾಗಲು ಸತ್ತಂತಹ ವ್ಯಕ್ತಿಗಳ ಮೇಲೆ ಗೋರಿ ಅಥವಾ ಗದ್ದುಗೆಗಳನ್ನು ನಿರ್ಮಿಸುತ್ತಾರೆ. ಇದರಿಂದ ಹೆಣಕ್ಕೆ ಶೃಂಗಾರ ಮಾಡಿದಂತೆ ವ್ಯರ್ಥವಾಗುತ್ತದೆ.

ಏಕೆಂದರೆ ಒಬ್ಬ ವ್ಯಕ್ತಿ ಬದುಕಿದ್ದಾಗಲೇ ಪ್ರೀತಿ, ಗೌರವ ಹಾಗೂ ವಿಶ್ವಾಸಗಳಿಂದ ನೋಡಿಕೊಂಡರ ಅದೇ ಸಾರ್ಥಕ ಜೀವನವೆನಿಸುತ್ತದೆ. ಆದ್ದರಿಂದ ಬದುಕಿದ್ದಾಗ ಮಾತ್ರ ಆತನ ಜೀವಕ್ಕೆ ಜೀವನಕ್ಕೆ ಬೆಲೆಯಿರುತ್ತದೆಯೇ ಹೊರತು ಸತ್ತಮೇಲೆ ಅಲ್ಲ ಎಂಬುದು ಆಧುನಿಕ ವಚನಕಾರ್ತಿಯರ ಅಭಿಪ್ರಾಯವಾಗಿದೆ. ಬದುಕಿದ್ದಾಗ ವ್ಯಕ್ತಿಗೆ ಪ್ರೀತಿ, ವಿಶ್ವಾಸ, ಗೌರವಗಳನ್ನು ತೋರಿಸಿದರೆ ಆ ವ್ಯಕ್ತಿ ತುಂಬಾ ಸಂತೋಷಪಡುತ್ತಾನೆ. ಹಾಗೂ ಆತ ನೆಮ್ಮದಿಯ ಜೀವನ ನಡೆಸಲು ಸಹಕಾರಿಯಾಗುತ್ತದೆ. ಆದ್ದರಿಂದ ಸತ್ತಾಗ ಗದ್ದುಗೆಯನ್ನು, ಗೋರಿಯನ್ನು ನಿರ್ಮಿಸುವುದು ಮೂರ್ಖತನವಾಗುತ್ತದೆ ಅಂದರೆ "ಊರು ಉಪಕಾರ ಅರಿಯದು ಹೆಣ ಶೃಂಗಾರ ಅರಿಯದು" ಎಂಬ ಗಾದೆಯಂತೆ ವ್ಯಕ್ತಿ ಸತ್ತನಂತರ ಬಂಧುಗಳೆಲ್ಲಾ ಸೇರಿ ಹೆಣಕ್ಕೆ ಶೃಂಗಾರ ಮಾಡಿದರೆ ಅದು ನೋಡಿ ಸಂತೋಷ ಪಡುತ್ತದೆಯೇ? ಅದಕ್ಕೆ ಶೃಂಗಾರ ಅರ್ಥವಾಗುತ್ತದೆಯೇ ಖಂಡಿತ ಇಲ್ಲ ಏಕೆಂದರೆ ಈ ಯಾವುದರ ಅರಿವೂ ಆ ಹೆಣಕ್ಕೆ ಇರುವುದಿಲ್ಲ. ಆದ್ದರಿಂದಲೇ ಹೆಣ ಶೃಂಗಾರ ಅರಿಯದು ಎಂಬ ಸಾರ್ವತ್ರಿಕ ಸತ್ಯ ಇಲ್ಲಿ ಅಡಗಿದೆ.

"ಇದ್ದಾಗ ತುತ್ತನ್ನವಿಕ್ಕದೆ ಸತ್ತಾಗ
ಗದ್ದುಗೆಗಳ ನಿರ್ಮಿಸುವರಯ್ಯ
ಇದ್ದಾಗ ಇದ್ದಾಗ ನೋಡಿಕೊಳ್ಳದೆ
ಸತ್ತಾಗ ಹೆಣಕೆ ಶೃಂಗರಿಸಿ ಮೆರವಣಿಗೆ ಮಾಡುವರಯ್ಯ
ಹೆಣ ಶೃಂಗಾರ ಅರಿಯದು, ಊರು ಉಪಕಾರ ಅರಿಯದು
ಎಲ್ಲ ವ್ಯರ್ಥ ಎನುತಿಹರು ಶಿವರಾತ್ರಿ ರಾಜೇಂದ್ರರು"

ಊರು ಉಪಕಾರ ಅರಿಯದು ಎಂಬುದು ಗಾದೆಯ ಮತ್ತೊಂದು ತುಣುಕಾಗಿದೆ. ಒಬ್ಬ ವ್ಯಕ್ತಿ ತಾನು ಹುಟ್ಟಿ ಬೆಳೆದ ಸ್ವಂತ ಊರಿಗೆ ಎಷ್ಟೇ ಉಪಕಾರ ಮಾಡಿದರೂ ಜನಪರ ಕೆಲಸಕಾರ್ಯಗಳನ್ನು ಊರಿನಲ್ಲಿರುವ ಕೆಲವು ದುಷ್ಟ ಜನರು ವ್ಯಕ್ತಿ ಮಾಡಿದ ಉಪಕಾರವನ್ನು ಬೇಗ ಮರೆತುಬಿಡುತ್ತಾರೆ. ಅಲ್ಲದೆ ಊರಿಗೆ ಸಹಾಯ ಮಾಡಿದ ವ್ಯಕ್ತಿಗೇ ಅಪಮಾನಮಾಡುತ್ತಾರೆ. ಆತನನ್ನು ನಿಂದಿಸುತ್ತಾರೆ. ಎಷ್ಟೇ ಒಳ್ಳೆಯ ಕೆಲಸ ಕಾರ್ಯಗಳನ್ನು ಮಾಡಿದರು ಕಾಲಕ್ರಮೇಣ ಅದು ಮನಸ್ಸಿನಿಂದ ದೂರ ಉಳಿಯುತ್ತದೆ ಎಂಬ ಭಾವನೆ ಇದೆ.

ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಯೂ ತಾನು ಬದುಕಿದ್ದಾಗಲೇ ಬೇರೆಯವರಿಗೆ ಸಹಾಯ ಮಾಡಬೇಕು ಅಲ್ಲದೆ ತಂದೆ-ತಾಯಿಗಳನ್ನು ಬಂಧುಬಳಗದವರನ್ನು , ಗುರುಹಿರಿಯರನ್ನು ಪ್ರೀತಿ, ವಿಶ್ವಾಸ ಹಾಗೂ ಗೌರವಗಳಿಂದ ಅವರನ್ನು ನೋಡಿಕೊಳ್ಳಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಸತ್ತನಂತರ ಸಾವು

ಎಷ್ಟೇ ಪಶ್ಚಾತ್ತಾಪಪಟ್ಟರೂ ಅದು ಪ್ರಯೋಜನವಾಗುವುದಿಲ್ಲ ಎಂಬ ನೀತಿ ತತ್ವ ಈ ವಚನದಲ್ಲಿ ಎದ್ದುಕಾಣುತ್ತದೆ.

**೨) ಸ್ತ್ರೀ-ಪುರುಷ ಚಿಂತನೆ**

ವಿಶ್ವದ ಇತಿಹಾಸದಲ್ಲಿ, ಭಾರತದಲ್ಲಿ ಅದರಲ್ಲೂ ಕರ್ನಾಟಕದ ಚರಿತ್ರೆಯಲ್ಲಿ ಹನ್ನೆರಡನೇ ಶತಮಾನಕ್ಕೆ ವಿಶಿಷ್ಟ ಸ್ಥಾನವಿದೆ. ಇದಕ್ಕೆ ಕಾರಣ ವೀರಶೈವ ಧರ್ಮದ ಪ್ರವರ್ತಕರು ಹಾಗೂ ಅವರ ಸಾಮಾಜಿಕ ಕಳಕಳಿ. ಈ ಶರಣ ಧರ್ಮದ ನೇತಾರರಾಗಿ, ವೀರಶೈವ ಧರ್ಮಕ್ಕೆ ವೈಚಾರಿಕ ನೆಲೆಗಟ್ಟನ್ನು ಹಾಕಿ ಧರ್ಮದೊಡನೆ, ಸಾಮಾಜಿಕ ಜಾಗೃತಿ ಪರಿವರ್ತನೆಯನ್ನು ಮಾಡಿದ ಕೀರ್ತಿಬಸವಣ್ಣನವರಿಗೆ ಸಲ್ಲುತ್ತದೆ.

ಸಕಲ ಜೀವಾತ್ಮರಿಗೂ ಲೇಸನ್ನು ಬಯಸುವವನೇ ನಿಜವಾದ ಕುಲಜ, ಮಾನವ ಧರ್ಮದ ಉದ್ಧಾರಕ್ಕಾಗಿ ದುಡಿದ ಮಹಾಪುರುಷರೆಂಬುದು ಉಲ್ಲೇಖಾರ್ಹ. ಜನರ ಪರವಾದ ಈ ಚಳವಳಿಯ ಮೂಲಕ ಜನಶೋಷಣೆಯ ಎಲ್ಲಾ ಪ್ರಕಾರಗಳಿಗೂ ಪೂರ್ಣ ವಿರಾಮ ಹಾಕಿ ವೈಚಾರಿಕ ಕ್ರಾಂತಿಯನ್ನು ಸ್ಥಾಪಿಸಿದ ಬಗೆ ಅನನ್ಯ ಮತ್ತು ಅದ್ಭುತ, ಸಮಾನತೆಯ ಅಡಿಪಾಯದ ಮೇಲೆ ಸಮಾಜದ ನಿರ್ಮಾಣ ಮಾಡಲು ಸದೃಢ ಸಮಾಜದ ಅಭಿವೃದ್ಧಿಗೆ ಪೂರಕವಾದ ವಿಚಾರಗಳನ್ನು, ಧರ್ಮದ ತಳಹದಿಯ ಮೇಲೆ ನಿರ್ಮಿಸಿದ, ಅಳವಡಿಸಿದ ತಂತ್ರಗಾರಿಕೆಯ ನೈಪುಣ್ಯ ಬಸವಣ್ಣನವರ ಬಹುಮುಖ ಪ್ರತಿಭೆಗೆ ಹಾಗೂ ಜ್ಞಾನ– ಆಧ್ಯಾತ್ಮಗಳ ಅನುಭೂತಿಗೆ ಕೈಗನ್ನಡಿಯಾಗಿವೆ.

ಸಮಾನತೆಯ ಪರಿಕಲ್ಪನೆಯಿಂದ ಮೊದಲು ಸಮಾಜದಲ್ಲಿ ಅನಿಷ್ಟವಾದ ಜಾತಿ ಮತ್ತು ಲಿಂಗಭೇದಗಳನ್ನು ತೊರೆಯಲು ಪಣತೊಟ್ಟರು. ಧಾರ್ಮಿಕ ಹಾಗೂ ಆಧ್ಯಾತ್ಮಿಕ ಅವಶ್ಯಕತೆಗಳಿಗೆ ಅನುಗುಣವಾಗಿ ಹುಟ್ಟಿದ ಈ ಗುರಿಯು ಸಮಾಜದ ಆಳುವ ವರ್ಗ, ಪುರೋಹಿತ ವರ್ಗಗಳು ರೂಡಿಸಿದ್ದ ವಿವಿಧ ಕೆಳಜಾತಿವರ್ಗಗಳ ಜನರಿಂದ ಸ್ಫೋಟಿಸಿತು. ಹೀಗೆ ಸಮಾಜದಲ್ಲಿ ಬಡವ ಬಲ್ಲಿದ, ಸ್ತ್ರೀ–ಪುರುಷರಲ್ಲದೆ ಎಲ್ಲರನ್ನು ಧಾರ್ಮಿಕ, ಸಾಮಾಜಿಕ, ಆಧ್ಯಾತ್ಮಿಕ ಹೋರಾಟಕ್ಕೆ ಅಣಿಗೊಳಿಸಿದ್ದಾರೆ. ಸಮಾಜದ ಅನಿಷ್ಟಗಳನ್ನು ಝಾಡಿಸಿ ಸಂಸ್ಕೃತಿಯನ್ನು ಚಾಲನೆಗೊಳಿಸಿ ವ್ಯಕ್ತಿವಿಕಾಸ, ಸಮಾನತೆ, ಕ್ರಿಯಾಶೀಲತೆ, ಸೃಜನಶೀಲತೆಗಳನ್ನು ಏಕಕಾಲದಲ್ಲಿ ದುಡಿಸಿಕೊಂಡ ಪ್ರಜ್ಞಾಶೀಲತೆ, ಜೀವನ ಕಲೆಗಾರಿಕೆ ವಚನಕಾರರು ಹಾಗೂ ವಚನಸಾಹಿತ್ಯದ ತಿರುಳಾಗಿದೆ. ಮಾನವೀಯ ಅಂಶಗಳನ್ನು ಒಳಗೊಂಡು ಈ ಸಾಹಿತ್ಯ ಸ್ತ್ರೀ ಸಮಾನತೆಯ ಪ್ರೇರಕ ಹಾಗೂ ಪೂರಕ ಅಂಶಗಳನ್ನು ಒಳಗೊಂಡು ಶ್ರೇಷ್ಠ ಸಾಹಿತ್ಯವಾಗಿದೆ.

ಹನ್ನೆರಡನೇ ಶತಮಾನದಲ್ಲಿ ಚಲನಶೀಲತೆಯನ್ನು ಕಳೆದುಕೊಂಡಿದ್ದ ಸಮಾಜ, ಮನುಷ್ಯ ಜೀವನದ ನಿರರ್ಥಕ ಬಾಳನ್ನು ಕೆಳವರ್ಗದವರು ಹಾಗೂ ಸ್ತ್ರೀಯರನ್ನು ಕಡೆಗಣಿಸಿದ್ದ ಪರಿಸ್ಥಿತಿಯನ್ನು ಗಮನಿಸಿದರು. ರೋಗಗ್ರಸ್ಥ ಸಮಾಜಕ್ಕೆ ಧನ್ವಂತರಿಯಾದರು ಅಗತ್ಯ ವಿಚಾರಗಳೆಂಬ ಔಷಧಿಯನ್ನು ನೀಡಿದರು. ಧಾರ್ಮಿಕ ಚಿಂತನ ಹಾಗೂ ಮಂಥನಗಳ ಮೂಲಕ ಕಾಯಕ, ಸಮಾನತೆ, ಸಾಮಾಜಿಕ ನ್ಯಾಯ, ಸ್ತ್ರೀ ಸಮಾನತೆ ಅಭಿವ್ಯಕ್ತಿ ಸ್ವಾತಂತ್ರ್ಯದ ಮೂಲಕ ಸರ್ವರಿಗೂ ಆಧ್ಯಾತ್ಮಿಕತೆಗೆ ಮುಕ್ತ ಪ್ರವೇಶ ನೀಡಿದರು ಜೀವದ ಶಾಶ್ವತ ಸತ್ಯಗಳನ್ನು ಶೋಧಿಸುವತ್ತ ಜನರ ಗಮನ ಸೆಳೆದರು. ಸಮಾಜದಲ್ಲಿ ಶತ ಶತಮಾನಗಳಿಂದಲೂ ಸ್ತ್ರೀಯರನ್ನು ಕುರಿತು ಇದ್ದ ದೃಷ್ಟಿದೋಷವನ್ನು ಸರಿಪಡಿಸಿದ ಕೀರ್ತಿಯೂ ವಚನಕಾರರಿಗೆ ಸಲ್ಲುತ್ತದೆ.

ಹೀಗಾಗಿ ಸ್ತ್ರೀಪರವಾದ ಅವರ ದೃಷ್ಟಿಕೋನ ಉದಾತ್ತವೂ, ವಿಶಿಷ್ಟವೂ ಆಗಿದೆ. ಇದು ಭರತಖಂಡದ ಇತರ ಎಲ್ಲಾ ಧರ್ಮದ ಧೋರಣೆಗಳಿಗಿಂತ ಭಿನ್ನವಾಗಿದೆ ಹಾಗೂ ಮಾನವೀಯವಾಗಿದೆ ಎಂಬುದೇ ವಚನಕಾರರ ಹಿರಿಮೆಯನ್ನು ಎತ್ತಿಹಿಡಿದಿದೆ.

ವೇದಗಳ ಕಾಲದಲ್ಲಿ ಗಾರ್ಗಿಮೈತ್ರೇಯದಂತಹ ಬ್ರಹ್ಮವಾದಿನಿಯರು ಇದ್ದರೆಂಬುದು ಸ್ತ್ರೀಯರ ಬೌದ್ಧಿಕ, ಆಧ್ಯಾತ್ಮಿಕ ಉನ್ನತಿಯ ನಿದರ್ಶವಾಗಿದೆ. ಆದರೂ ಇಂತಹ ಉದಾರಣೆಗಳು ಇತಿಹಾಸದ ಉದ್ದಕ್ಕೂ ಕಾಣಬರುವುದಿಲ್ಲ ಎಂಬುದು ಮುಖ್ಯವಾದ ವಿಚಾರವಾಗಿದೆ.

ಸ್ತ್ರೀಪುರುಷರ ಭೇದವು ಸಮಾಜದಲ್ಲಿ ನೆಲೆಗೊಳ್ಳಲು ಸಾಧನ, ಮೂಲ ವಿಚಾರಗಳು ಕಾರಣವಾಗಿದ್ದವು ಅವುಗಳು ಧರ್ಮ ವಿರುದ್ಧವೆಂದು ಮೊದಲಿಗೆ ಪ್ರತಿಕ್ರಿಯಿಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ. ಶೀಲ ಚಾರಿತ್ರ್ಯಗಳ ಮೇಲೆ ಸುಂದರ ಸಮಾಜ ನಿರ್ಮಿಸಿದ ವಚನಕಾರರು ತಮ್ಮ ನೀತಿಸಂಹಿತೆಯಲ್ಲಿ ಪುರುಷರು ಸ್ತ್ರೀಯರನ್ನು ಕುರಿತ ಗೌಣದೃಷ್ಟಿಯನ್ನು ಬದಲಾಯಿಸಲು ಪ್ರಯತ್ನಿಸಿದರು. ಹೆಣ್ಣನ್ನು ಭೋಗದ ವಸ್ತುವನ್ನಾಗಿ ಪರಿಗಣಿಸಿ ಅವಳನ್ನು ದೌರ್ಜನ್ಯದಿಂದ ಕಾಮಪಿಪಾಸೆಗೆ ಒಳಗು ಮಾಡುತ್ತಾ ಬಂದಿದ್ದ ದೃಷ್ಟಿಕೋನವನ್ನು ಪುರುಷರ ದೋಷವನ್ನು ನಯವಾದ ಮಾತುಗಳಿಂದ ತಿದ್ದುವ ಮೂಲಕ ಎಚ್ಚರಿಸಿದರು. ಸಾಮಾಜಿಕ ನೆಲೆಯಲ್ಲಿ ಸ್ತ್ರೀಗೆ ಮಾತ್ರ ಎಂದು ನಂಬಿದ್ದ ಮೌಲ್ಯವನ್ನು ತಳ್ಳಿ ಹಾಕಿದರು. ಆದರೆ ಪುರುಷರಿಗೂ ಶೀಲಚಾರಿತ್ರ್ಯ ಅಗತ್ಯವೆಂದು ಸಾರಿದರು. ಪರ ಸ್ತ್ರೀ ವ್ಯಾಮೋಹದ ಬಗ್ಗೆ ಎಚ್ಚರಿಕೆ ನೀಡಿದರು. "ಪರಸ್ತ್ರೀ– ಪರಧನವೆಂಬ ಜೂಬಿಂಗಂಜುವೆ? ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ, ಪರಸತಿಯ ನೋಡುವ ಸರಸಬೇಡ ಕಾಣಿರಣ್ಣಾ" ಎಂದು ತಿಳಿಸಿದರು. ಅಲ್ಲದೆ ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ಪರವಧುವನ್ನು ಮಹಾದೇವಿಯೆಂಬ ಮಾತುಗಳಲ್ಲಿ ಹೆಣ್ಣಿನ

ಬಗೆಗಿನ ಗೌರವದ ಔನತ್ಯವೂ ಹೆಸರಿನಲ್ಲಿ ದೈವತ್ವವನ್ನು ಕಾಣುವ ದೈವೀ ನಿಲುವು ತಳೆದಿರುವುದು ಗಮನಾರ್ಹ.

ಸ್ತ್ರೀ ಭಕ್ತಿ ಆದರೆ ಭವಿತವಿಲ್ಲ ಋತುಚಕ್ರದ ಅವಧಿಯಲ್ಲಿ ಸೂಚಕವೆಂದು ಹೊರಗಿರಿಸುವುದು, ಮಾಡಿದ ಅಡಿಗೆ ಅಪವಿತ್ರ ಎಂದು ಗುರುವಿಗೆ ಬಡಿಸಲಾಗದು ಎಂಬ ನಂಬಿಕೆಯನ್ನು ತಳ್ಳಿಹಾಕಿದರು. ಸ್ತ್ರೀಯರು ಸಾಧನೆಗೆ ವಿಘ್ನವೆಂಬುದನ್ನು ತೊಡೆದುಹಾಕಿ ಸ್ತ್ರೀ ಶಕ್ತಿಯಿಲ್ಲದೆ ಪುರುಷನಿಲ್ಲ. ಪುರುಷನಿಲ್ಲದೆ ಶಕ್ತಿಯಿಲ್ಲ ಎಂಬ ಆಲೋಚನೆಯಿಂದ ಹುಳಿವಿಡಿದು ಘೃತವಕಣ್ವಂತೆ ಕೂಡಲಸಂಗನ ಶರಣರು ಸತಿವಿಡಿದು ನಿರ್ವಾಣ ಸತಿ ಕಣ್ವರು ಕೇಳಾ ಪ್ರಭುವೇ ಎಂಬಲ್ಲಿ ಸ್ತ್ರೀ ಮೂಲಕವೇ ಮುಕ್ತಿ ಅಥವಾ ಸದ್ಗತಿ ಸಾಧ್ಯ ಎಂದಿದ್ದಾರೆ. ಅಲ್ಲದೆ ಶಿವನು ಅರ್ಧನಾರೀಶ್ವರ ಎಂಬ ಕಲ್ಪನೆಗೆ ಮಹತ್ವ ನೀಡಿದ ವಚನಕಾರರು ತ್ರಿಮೂರ್ತಿ ಸ್ತ್ರೀ ಸಮೇತರಾಗಿಯೇ ಮಾನ್ಯರು ಎಂದು ಪ್ರತಿಪಾದಿಸಿದರು. ವಚನಕಾರರಿಗಿಂತ ಹಿಂದೆ ಧಾರ್ಮಿಕ ಆಧ್ಯಾತ್ಮಿಕ ಅನುಸರಣೆ ಕೇವಲ ಜೀವನದಲ್ಲಿ ನೊಂದವರು ವಿರಕ್ತರಾದವರು ಮಾತ್ರ ಬಯಸುತ್ತಿದ್ದ ವಿಚಾರಗಳಾಗಿದ್ದವು ಆ ಮನೋಧರ್ಮ ಬೆಳೆಸಿಕೊಂಡವರು ವಿರಳಾತಿವಿರಳರಾಗಿದ್ದರು. ಉಳಿದಂತೆ ಸಂಸಾರಿಗಳಿಗೆ ಅದರ ಬಗ್ಗೆ ಒಲವಾಗಲಿ, ಆಚರಿಸಬೇಕೆಂಬ ಉತ್ಸಾಹವಾಗಲಿ ಇದ್ದಂತೆ ತೋರುವುದಿಲ್ಲ ಆಧ್ಯಾತ್ಮಿಕತೆಯು ಸಂಸಾರಿಕತೆಯಿಂದ ಹೊರಗೆ ವಿರಕ್ತಿ ಪರವಾಗಿ ಮಾಡುವಂತಹ ಸಾಧನೆ ಎಂಬ ನಂಬಿಕೆ ಬೇರೂರಿದ್ದ ಪರಿಸ್ಥಿತಿ ಇತ್ತು. ಬಹುಪಾಲು ಜನರು ಸಂಸಾರದ ಜಂಜಾಟದಲ್ಲಿ ಮುಳುಗಿ ಧಾರ್ಮಿಕತೆ ಹಾಗೂ ಆಧ್ಯಾತ್ಮಿಕ ಆಸಕ್ತಿಯನ್ನು ಬೆಳೆಸಿ ಆಚರಿಸಲು ಇಷ್ಟಪಡುತ್ತಿರಲಿಲ್ಲ. ಆದರೆ ವಚನಕಾರರು ವಿರಕ್ತಿಯೇ ಸಾಧನೆಗೆ ಆಧ್ಯಾತ್ಮಿಕತೆಗೆ ಮೂಲವೆಂದು ಹೇಳಲಿಲ್ಲ. ಬದಲಿಗೆ ಸಂಸಾರವು, ಧಾರ್ಮಿಕ ಆಧ್ಯಾತ್ಮಿಕ ಅನುಸರಣೆಯಿಂದ ಹೆಣ್ಣು ಗಂಡು ಮುಕ್ತವಾಗಿ, ಮುನ್ನಡೆಯಲು ಸಾಧನಾ ಕ್ಷೇತ್ರ ಎಂದು ಸಾರಿದರು. ಇದಕ್ಕಾಗಿ 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಬಸವಣ್ಣನವರು ಹೇಳಿದ್ದಾರೆ,

"ಭಕ್ತನ ಮನ ಹೆಣ್ಣಿಗೊಳಗಾದಡೆ ವಿವಾಹವಾಗಿ ಕೂಡುವುದು
ಭಕ್ತನ ಮನ ಮಣ್ಣಿಗೊಳಗಾಗದೆ ಕೊಂಡು ಆಲಯವ ಮಾಡುವುದು
ಹೊನ್ನಿನೊಳಗಾದಡೆ ಬಳಲಿ ದೊರಕಿಸುವುದು ನೋಡಾ"

ಕಪಿಲಸಿದ್ಧಮಲ್ಲಿಕಾರ್ಜುನ ಎಂಬ ಸಿದ್ಧರಾಮನ ವಚನವಾಗಲಿ, ವಚನಕಾರರು ಜೀವನದ ಬಗ್ಗೆ ಇಟ್ಟ ವಾಸ್ತವ ಭಾವನೆಯ ಪ್ರತೀಕವಾಗಿದೆ. "ಮರ್ತ್ಯಲೋಕ ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವವರು ಅಲ್ಲಿ ಸಲ್ಲುವರಯ್ಯ ಕೂಡಲ ಸಂಗಮದೇವ" ಎಂಬ ಬಸವಣ್ಣನವರ ವಚನದಲ್ಲಿ ಈ ಲೋಕದ ಜೀವನ ಸರಳತೆ ಸತ್ಯ ಎಂಬ ಸುಂದರ ನಿಲುವು ವ್ಯಕ್ತವಾಗಿದೆ. ಆದ್ದರಿಂದಲೇ ಜೀವನದ ಮೂಲಕ ಧಾರ್ಮಿಕತೆಯು,

ಆಧ್ಯಾತ್ಮಿಕ ಪ್ರಪಂಚದೆಡೆಗೆ ಒಯ್ದು ಮಾನಸಿಕ ಶಾಂತಿ ನೀಡುವ ಶರಣರ ಹಾದಿ ಎಲ್ಲರನ್ನು ಕ್ಷಿಪ್ರವಾಗಿ ಆಕರ್ಷಿಸಿತು.

ಶರಣರು ಹೆಣ್ಣನ್ನು ಈ ಪರಿಧಿಯಿಂದ ಹೊರತಂದರು. ಹೆಣ್ಣು ಮಾಯೆಯಲ್ಲಿ ಎಂದು ಘೋಷಿಸಿದರು. ಹೆಣ್ಣು ಮಾಯೆ ಎಂಬುದನ್ನು ಕುರಿತು ವೈರಾಗ್ಯನಿಧಿ ಅಲ್ಲಮಪ್ರಭು ಒಂದು ಅತ್ಯುತ್ತಮ ಎನ್ನಬಹುದಾದ ವೈಜ್ಞಾನಿಕ ವಿಚಾರವನ್ನು ತಮ್ಮ ವಚನದಲ್ಲಿ ಮಂಡಿಸಿದ್ದಾರೆ.

"ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ
ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ"

ಎಂಬ ಸಮರ್ಥ ವಿಚಾರ ನೀಡಿದ್ದಾರೆ. ಅಕ್ಕನೂ ಸಹ ಮಾಯೆ ಎಂಬುದು ಪರಸ್ಪರ ಆಕರ್ಷಣೆಯೇ ಹೊರತು ಹೆಣ್ಣೊಬ್ಬಳನ್ನೇ ಮಾಯೆಯೆಂದು ದೂಷಿಸುವುದು ಸರಿಯಲ್ಲ ಎಂದಿದ್ದಾಳೆ. "ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ", ಎಂದು ಮಾಯೆಯ ವ್ಯಾಪ್ತಿಯನ್ನು ಹೀಗೆ ಅಳೆಯಲಾಗದು. ಹೆಣ್ಣು ಮಾಯೆ ಎನ್ನುವುದಾದರೆ ಗಂಡೂ ಹೆಣ್ಣಿನ ಪಾಲಿಗೆ ಮಾಯೆಯೇ ಎಂದು ಗಂಡಸರು ಮರೆತಿರುವುದನ್ನು ನೆನಪಿಸಿದಂತೆ ಕಾಣುತ್ತದೆ. ಹೀಗೆ ಹೆಣ್ಣು ಮಾಯೆಯಲ್ಲ ಎಂಬುದು ವೀರಶೈವ ಧರ್ಮದ ವಚನ ಸಾಹಿತ್ಯದ ಪುನರ್ಮೌಲ್ಯ ಮಾಪನಗಳಲ್ಲಿ ಒಂದಾಗಿದೆ ಎನ್ನಬಹುದು. ಸ್ತ್ರೀ ಸ್ವಾತಂತ್ರ್ಯ ಸಮಾನತೆಗೆ ಮೌಲ್ಯ ನೀಡಿದ ಈ ವಿಚಾರಗಳು ಅರ್ಥಪೂರ್ಣವಾಗಿದೆ.

ಬಸವಣ್ಣ ರೂಪಿಸಿದ ಜನರ ಬದುಕು ಶರಣ ದೃಷ್ಟಿಕೋನದಿಂದ ಘನತೆ ಪಡೆಯಿತು. ಅಂತೆಯೇ ಶರಣೆಯರ ಬದುಕೂ ಸಹ ಅವರೊಡನೆ ತೋರಿದ ನಿಷ್ಠೆ ಪಡೆದ ಸಮಾನತೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಅನುಭಾವಿಕ ಆಧ್ಯಾತ್ಮ ವಿಚಾರಗಳಿಂದ ಪ್ರಫುಲ್ಲಿತವಾಯಿತು. ಸ್ತ್ರೀ ಕೇವಲ ಕಾಮ ಸಾಧನವಾಗದೆ ಗಂಡನ ಜೀವನದಲ್ಲಿ ವೈಚಾರಿಕ ಸಹಭಾಗಿಯಾಗಿ ಪಾಲ್ಗೊಳ್ಳಬೇಕು ಎಂಬ ವಿಚಾರಕ್ಕೆ ಮನ್ನಣೆ ದೊರೆತು ಶರಣರಿಗೆ ಹೆಗಲೆಣೆಯಾಗಿ ನಿಂತು ಬೆಳೆಯಬೇಕೆಂಬ ಹಂಬಲ ಆತ್ಮವಿಶ್ವಾಸಗೊಳಿಸುವಲ್ಲಿ ಶರಣರು ಅದಕ್ಕೆ ಇಂಬು ಕೊಟ್ಟಿದ್ದು ಎರಡೂ ಚಾರಿತ್ರಿಕವಾಗಿ ದಾಖಲಾರ್ಹ ಅಂಶಗಳೇ ಆಗಿವೆ.

ಹೆಣ್ಣಿನ ಬಗ್ಗೆ ಮಾತನಾಡುವವರು ಹೆಣ್ಣಿನ ಸ್ಥಾನಮಾನಗಳನ್ನು ಅವಳ ಕರ್ತವ್ಯ ಜವಾಬ್ದಾರಿ ಹಾಗೂ ಹೊಣೆಗಾರಿಕೆಗಳೇನು? ಎಂಬುದನ್ನು ತಿಳಿದುಕೊಂಡು ಮಾತನಾಡುವುದು ಒಳ್ಳೆಯದು.

ಅವಳಿಗಿರುವ ಶ್ರೇಷ್ಠ ಸಂಪ್ರದಾಯ ಇತಿಹಾಸಗಳನ್ನು ಅರಿತು ಅವಳ ಭವ್ಯ ಚರಿತ್ರೆಗಳನ್ನು, ಅವಳತ್ಯಾಗ, ಬಲಿದಾನಗಳನ್ನು, ತಾಳ್ಮೆಸಂಯಮಗಳನ್ನು ಆಳವಾಗಿ ಅಧ್ಯಯನ ಮಾಡಿ ನಂತರ ಅವಳ ಸ್ಥಾನವೇನೆಂಬುದನ್ನು ಮನವರಿಕೆ ಮಾಡಕೊಳ್ಳಬೇಕು. ಆದ್ದರಿಂದ ಹೆಣ್ಣಿನ ಬಗ್ಗೆ ಸ್ವಲ್ಪವೂ ತಿಳಿದುಕೊಳ್ಳದೆ ಕೇವಲ ಮೂಗಿನ ನೇರಕ್ಕೆ ಮಾತ್ರ ಮಾತನಾಡುವುದು ಸರಿಯಲ್ಲ ಎಂದು ಹೇಳಿದ್ದಾರೆ.

ಹೆಣ್ಣು 'ಮಂಗಳ ಸ್ವರೂಪಳು' ಎಲ್ಲರಿಗೂ ಸುಖ ಸಂತೋಷವನ್ನು ಹಂಚುವ ಮಹಾತ್ಯಾಗಿ, ಸರ್ವರಿಗೂ ಒಳ್ಳೆಯದನ್ನು ಬಯಸುವ ಕರುಣಾಮಯಿ, ಅಂತಹ ಶ್ರೇಷ್ಠ ಹೆಣ್ಣನ್ನು ನಿಂದಿಸುವುದು ಸರಿಯಲ್ಲ 'ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ' ಎಂಬುದನ್ನು ಎಲ್ಲರೂ ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಹೆಣ್ಣು ಯಾವತ್ತೂ ಪುರುಷರನ್ನು ನರಕದ ಕಡೆಗೆ ಕೊಂಡೊಯ್ಯಲು ಸಾಧ್ಯವಿಲ್ಲ ಬದಲಿಗೆ ದಾರಿತಪ್ಪಿದ ಪುರುಷರನ್ನು ಸರಿದಾರಿಗೆ ತರುವವಳೇ ಹೆಣ್ಣು. ಆದ್ದರಿಂದ ಇಂತಹ ಮಹಾಮಾತೆಯನ್ನು ಕೆಲವರು ನರಕದೆಡೆಗೆ ಕೊಂಡೊಯ್ಯುವ ದಾರಿ ಎಂದು ಹೇಳುವವರು ಅವಳು ಮಹಾಮಾತೆ ರಸಸರಸ್ವತಿ. ಕಾವ್ಯಾಧಿದೇವತೆ ಎಂಬುದನ್ನು ಮರೆತಿದ್ದಾರೆ. ಆದ್ದರಿಂದ ಮೊದಲು ಅದನ್ನು ನೆನಸಿಕೊಳ್ಳಲಿ ಎಂದು ಸಲಹೆ ನೀಡಿದ್ದಾರೆ. ಆ ಮೂಲಕ ಹೆಣ್ಣಿನ ಬಗ್ಗೆ ವಿಶೇಷವಾದ ಕಾಳಜಿಯನ್ನಿಟ್ಟುಕೊಂಡು ಹೆಣ್ಣಿನ ಪರವಾದ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅನಾದಿಕಾಲದಿಂದಲೂ ಹೆಣ್ಣನ್ನು ಅಪಮಾನಗೊಳಿಸುತ್ತಾ ಬಂದವರಿಗೆ ಇಲ್ಲಿ ಶಿಕ್ಷೆ ಕಾದಿದೆ. ಹೆಣ್ಣನ್ನು ಹೀನಾಯವಾಗಿ ಕಾಣುವ ಹಾಗೂ ಹೆಣ್ಣಿನ ಬಗ್ಗೆ ಅಪಪ್ರಚಾರ ಮಾಡುತ್ತಿರುವ ಕೆಲವು ದುಷ್ಟ ಜನರ ವಿರುದ್ಧ ರಾಜೇಂದ್ರಸ್ವಾಮೀಜಿಗಳು ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ದೇವರ ಧರ್ಮದ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಅನ್ಯಾಯ ಅಕ್ರಮ, ದಬ್ಬಾಳಿಕೆ, ದೌರ್ಜನ್ಯಗಳನ್ನು ನಿಲ್ಲಿಸಬೇಕೆಂಬ ಎಚ್ಚರಿಕೆಯ ಸಂದೇಶವನ್ನು ನೀಡಿದ್ದಾರೆ.

"ಹೆಣ್ಣು ಹುಟ್ಟಿದರೆ ಉದ್ಧರಿಸುವರಯ್ಯ
ಹೆಣ್ಣಾದರೇನು? ಗಂಡಾದರೇನು'
ಅಪಕೀರ್ತಿ ತರುವ ಮಗನಿಗಿಂತ
ಕೀರ್ತಿತರುವ ಹೆಣ್ಣು ಶ್ರೇಷ್ಠ ಎನುತಿಹರು ಶಿವರಾತ್ರಿ ರಾಜೇಂದ್ರ"ರು

(ವಚನೋದ್ಭವ ರಾಜೇಂದ್ರ ಶಿಶು, ಪುಟ ಸಂಖ್ಯೆ – ೩೯)

ಈ ವಚನ ಹೆಣ್ಣಿಗೆ ಸಮಾಜದಲ್ಲಿ ಸಮಾನವಾದ ಸ್ಥಾನಮಾನಗಳು ಪ್ರೀತಿ ಗೌರವ ಆದರತೆಗಳು ಸಿಗಬೇಕೆಂದು ಪ್ರತಿಪಾದಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಹೆಣ್ಣು–ಗಂಡುಗಳ ಮಧ್ಯೆ ಅಂತರ ಹೆಚ್ಚಾಗುತ್ತಿರುವ ಇಂತಹ ಆಧುನಿಕ ಸಮಾಜದ ಸನ್ನಿವೇಶದಲ್ಲಿ ಈ ವಚನ ಭಾರಿ ಮಹತ್ವವನ್ನು ಪಡೆದುಕೊಂಡಿದೆ.

ಇತ್ತೀಚಿನ ದಿನಗಳಲ್ಲಿ ಹೆಣ್ಣನ್ನು ಕೀಳುದೃಷ್ಟಿಯಿಂದ ಕಾಣಲಾಗುತ್ತದೆ. ಇದಕ್ಕೆ ಬೆಂಬಲವೆಂಬಂತೆ ಇಂದಿನ ತಂದೆ-ತಾಯಿಗಳೂ ಸಹ ಗಂಡು ಮಗುವಿನ ಮೇಲೆ ಎಲ್ಲಿಲ್ಲದ ಪ್ರೀತಿವಿಶ್ವಾಸಗಳನ್ನು ತೋರಿಸುತ್ತಿದ್ದಾರೆ. ಗಂಡುಮಕ್ಕಳಿಂದ ಮಾತ್ರ ಮೋಕ್ಷ ಎಂಬ ತಪ್ಪು ಕಲ್ಪನೆಯನ್ನು ಹೊಂದಿದ್ದಾರೆ. ಅಲ್ಲದೆ ಗಂಡು ಮಕ್ಕಳು ಮನೆಯ ವಂಶೋದ್ಧಾರಕರಾಗುತ್ತಾರೆ ಬದುಕಿನ ಮುಸ್ಸಂಜೆಯಲ್ಲಿ ನಮಗೆ ಆಸರೆಯಾಗುತ್ತಾರೆ ಎಂಬ ಭಾವನೆಯಿಂದ ಗಂಡುಮಗುವಿಗೆ ಎಲ್ಲಿಲ್ಲದ ಪ್ರಾಮುಖ್ಯತೆ ನೀಡುತ್ತಿದ್ದಾರೆ. ಆದ್ದರಿಂದಲೇ ಇತ್ತೀಚೆಗೆ ಹೆಣ್ಣುಭ್ರೂಣ ಹತ್ಯೆಗಳು ವ್ಯಾಪಕವಾಗಿ ಬೆಳೆಯುತ್ತಿರುವ ಹಿನ್ನೆಲೆಯಲ್ಲಿ ಈ ವಚನ ಬಹಳ ಮಹತ್ವವನ್ನು ಪಡೆದುಕೊಂಡಿದೆ. ಗಂಡುಮಕ್ಕಳನ್ನು ಮಾತ್ರ ವಂಶದ ಕುಡಿಯೆಂದು ಭಾವಿಸಿರುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಆದ್ದರಿಂದ ಹೆಣ್ಣನ್ನು ಹೊಟ್ಟೆಯಲ್ಲಿರುವಾಗಲೇ ತನ್ನ ಕರುಳಿನ ಕುಡಿಯನ್ನು ಚಿವುಟಿ ಹಾಕುವ ಹೇಯಕೃತ್ಯವನ್ನು ಮಾಡಲಾಗುತ್ತದೆ. ಇದು ತುಂಬಾ ಶೋಚನೀಯವಾದ ಸಂಗತಿಯಾಗಿದೆ.

ಹೆಣ್ಣು ಎಂದಿದ್ದರೂ ಪರಮನೆಯ ಸ್ವತ್ತು ಅವಳು ಒಂದಲ್ಲಾ ಒಂದು ದಿನ ಗಂಡನ ಮನೆಗೆ ಹೋಗಲೇಬೇಕು. ಆದ್ದರಿಂದ ಅವಳಿಗೇಕೆ. ಶಿಕ್ಷಣ ಎಂಬ ಭಾವನೆಯಿದೆ. ಅಲ್ಲದೆ ಅವಳಿಗೆ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿ ವಿದ್ಯಾವಂತರನ್ನಾಗಿ ಮಾಡಿದರೆ ಅವರು ಮುಂದೆ ಗಂಡನ ಮನೆಯನ್ನು ಉದ್ಧಾರಮಾಡುತ್ತಾರೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬ ಗಾದೆಯಂತೆ ಹೆಣ್ಣುಮಕ್ಕಳಿಗೆ ತಾರತಮ್ಯ ಮಾಡಲಾಗುತ್ತದೆ. ಇದಕ್ಕೆ ಪೂರಕವೆಂಬಂತೆ, ಇತ್ತೀಚಿನ ದಿನಗಳಲ್ಲಿ ವರದಕ್ಷಿಣೆ ಎಂಬ ಭೂತವೂ ಸಹ ಹೆಣ್ಣಿಗೆ ವಿರುದ್ಧವಾಗಿ ನಿಂತಿದೆ. ಅಲ್ಲದೆ ಹೆಣ್ಣು, ಗಂಡಿಗೆ ಯಾವ ವಿಧದಲ್ಲೂ ಸರಿಸಮಾನಳಲ್ಲ. ಅವಳು ಅಬಲೆ, ದುರ್ಬಲಳು ಎಂಬ ಮೂಢ ನಂಬಿಕೆ ಇನ್ನೂ ಸಂಪೂರ್ಣವಾಗಿ ಪೋಷಕರಿಂದ ದೂರವಾಗಿಲ್ಲ. ಆದ್ದರಿಂದ ತಂದೆ-ತಾಯಿಗಳಿಗೆ ಹೆಣ್ಣು ಮಗು ಹುಟ್ಟಿದರೆ ಏನೋ ಒಂದು ರೀತಿಯ ತಾತ್ಸರ, ತಿರಸ್ಕಾರ ಭಾವನೆ ಬೆಳೆಯತೊಡಗಿದೆ.

ಹೆಣ್ಣು ಹುಟ್ಟಿದ ತಕ್ಷಣವೇ ತಂದೆ-ತಾಯಿಗಳು ನಿರಾಸೆಯ ಕೂಪಕ್ಕೆ ಬೀಳುತ್ತಾರೆ. ಅಯ್ಯೋ ಹೆಣ್ಣಾಯಿತೆ? ಒಂದೇ ಒಂದು ಗಂಡಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂಬ ಉದ್ಗಾರ ತೆಗೆಯುತ್ತಾರೆ. ಅಲ್ಲದೆ ವಂಶದ ಉದ್ಧಾರಕ್ಕಾಗಿ ಒಂದು ಗಂಡುಮಗುವಿಲ್ಲ ಎಂದು ಪಶ್ಚಾತ್ತಾಪಪಡುತ್ತಾರೆ. ಇಂತಹ ಮನೋಭಾವನೆ ಮೊದಲು ಮಹಿಳೆಯರಿಂದ, ಪೋಷಕರಿಂದ ದೂರವಾಗಬೇಕು. ಹೆಣ್ಣು ಮಕ್ಕಳನ್ನೂ ಗಂಡುಮಗುವಿನಂತೆ ಪ್ರೀತಿ, ಆದರತೆಯಿಂದ ನೋಡಿಕೊಳ್ಳಬೇಕೆಂಬುದು ಆಧುನಿಕ ವಚನಕಾರ್ತಿಯರ ಅಭಿಪ್ರಾಯವಾಗಿದೆ.

ರಾಜೇಂದ್ರಶಿಶುರವರ ಪ್ರಕಾರ ಹೆಣ್ಣಾದರೇನು ಗಂಡಾದರೇನು? ಇಬ್ಬರೂ ಒಂದೇ. ಅಪಕೀರ್ತಿ, ಅವಮಾನ ತರುವಂತಹ ಗಂಡುಮಗುವಿಗಿಂತ ಕೀರ್ತಿ ತರುವ ಹೆಣ್ಣೇ ಶ್ರೇಷ್ಠ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಹೆಣ್ಣು ಗಂಡುಗಳೆಂಬ ಭೇದವಿಲ್ಲ. ಯಾರು ಹುಟ್ಟಿದ ಮನೆಗೆ ಅಪಾರವಾದ ಕೀರ್ತಿಯನ್ನು, ಸಂತೋಷವನ್ನು, ನೆಮ್ಮದಿಯನ್ನು ತಂದು ಮನೆತನದ ದೀಪವನ್ನು ಬೆಳಗುತ್ತಾರೆಯೋ ಅವರೇ ಶ್ರೇಷ್ಠ ಎಂಬ ಅವರ ಅಭಿಪ್ರಾಯ ಮಾನವೀಯತೆಯಿಂದ ಕೂಡಿದೆ.

"ಹೆಣ್ಣು ಕಣ್ಣು ಇನಿಸಿದ ನನಯ್ಯ ಬಸವಣ್ಣನು
ಹೆಣ್ಣು ಮಹಾಮಾತೆಯಂದರಿತು
ಅಂತಶಕ್ತಿಯ ಉದ್ದೀಪನಗೊಳಿಸಿರ್ದನಯ್ಯ
ಬಸವಪಥಯ ನಗೆ ತೋರ್ದ ಎನ್ನ ಗುರು ಶಿವರಾತ್ರಿ ರಾಜೇಂದ್ರರು"

"ಹೆಣ್ಣೊಂದು ವಿದ್ಯೆ ಕಲಿತರೆ
ಶಾಲೆಯೊಂದು ತೆರೆದಂತೆ
ಭವ್ಯ ಸಂಸ್ಕೃತಿ ಬೆಳೆದುಬಂದಂತೆ
ಮನೆಯೊಂದು ಉದ್ಧಾರವಾದಂತೆ
ಹೆಣ್ಣು ಸಮಾಜದ ಕಣ್ಣು ಎಂದರು ಶಿವರಾತ್ರಿ ರಾಜೇಂದ್ರರು"

ಏಕೆಂದರೆ ಆರಂಭದಲ್ಲಿ ಗಂಡುಮಗು ಬೇಕೆಂದು ನೂರಾರು ದೇವರುಗಳಲ್ಲಿ ಹರಕೆ ಹೊತ್ತು ಗಂಡು ಮಗುವನ್ನು ಪಡೆದುಕೊಳ್ಳುತ್ತಾರೆ. ಆದರೆ ಅದೇ ಗಂಡುಮಕ್ಕಳು ಬೆಳೆದು ದೊಡ್ಡವರಾದ ಮೇಲೆ ಹೆತ್ತ ತಂದೆ-ತಾಯಿಗಳನ್ನು ಬಂಧುಬಳಗವನ್ನು ತೊರೆದು ಎಲ್ಲರನ್ನೂ ಅನಾಥರನ್ನಾಗಿ ಮಾಡಿಬಿಡುತ್ತಾರೆ. ಇತ್ತೀಚಿನ ದಿನಗಳಲ್ಲಿ ತಂದೆ-ತಾಯಿಗಳು ಹೆಣ್ಣುಮಕ್ಕಳಿಗಿಂತಲೂ ಗಂಡುಮಕ್ಕಳಿಂದಲೇ ಹೆಚ್ಚು ಕಷ್ಟಗಳನ್ನು ನೋವುಗಳನ್ನು, ಅಪಮಾನಗಳನ್ನು ಎದುರಿಸಬೇಕಾದ ಪರಿಸ್ಥಿತಿ ಬಂದಿದೆ. ಪರಿಸ್ಥಿತಿ ಹೀಗಿರುವಾಗ ಗಂಡು-ಹೆಣ್ಣೆಂಬ ತಾರತಮ್ಯ ಭಾವನೆಯೇಕೆ? ಗಂಡಿನಂತೆ ಹೆಣ್ಣುಮಗುವಿಗೂ ಉತ್ತಮವಾದ ಶಿಕ್ಷಣವನ್ನು ನೀಡಿದರೆ – ಅವಳನ್ನು ಮುಂದುವರಿಸಿದರೆ ತಂದೆ-ತಾಯಿಗಳ ಬಾಳಿಗೆ ದಾರಿದೀಪವಾಗುತ್ತಾಳೆ ಹಾಗೂ ಬದುಕಿನ ಮುಸ್ಸಂಜೆಯಲ್ಲಿ ಅವರಿಗೆ ಆಶ್ರಯದಾತಳಾಗುತ್ತಾಳೆ. ಪುರುಷರಂತೆ ಮಹಿಳೆಯರೂ ಸಹ ಸಂಸಾರದ ಹಾಗೂ ತಂದೆ-ತಾಯಿಗಳ ಸಾಮಾಜಿಕ, ಆರ್ಥಿಕ ಜವಾಬ್ದಾರಿಯನ್ನು ಹೊತ್ತು ಯಶಸ್ವಿಯಾಗಿ ಮುನ್ನಡೆಯುತ್ತಿರುವುದನ್ನು ನಾವು ಕಾಣಬಹುದಾಗಿದೆ. ಅಲ್ಲದೆ ಕುಟುಂಬವನ್ನು ಆರ್ಥಿಕ ಸಂಕಷ್ಟದಿಂದ

ದೂರಮಾಡಬಲ್ಲಳು. ಆದ್ದರಿಂದ ತಂದೆ ತಾಯಿಗಳಿಗೆ ಈ ವಚನ ಉತ್ತಮ ಮಾರ್ಗಸೂಚಿಯಾಗಿದೆ. ಗಂಡುಮಕ್ಕಳುಬೇಕೆಂದು ಹಂಬಲಿಸುವವರಿಗೆ ಇದು ಜೀವಂತ ಉದಾಹರಣೆಯಾಗಿದೆ.

"ಹೆಣ್ಣು ಜನಿಸಿತು ಎಂದು ಕೊರಗದಿರು
ಜಗಜ್ಜನನಿ ಆದಿಶಕ್ತಿಯೂ ಹೆಣ್ಣೆ ತಾನೇ
ಗಂಡು ಜನಿಸಬೇಕೆಂಬ ಪಕ್ಷಪಾತವೇಕೆ ತಾಯಿ
ಸಾಧನೆಗೆ, ಆತ್ಮಕ್ಕೆ ಹೆಣ್ಣುಗಂಡು ಭೇದಗಳೆನಿತಿಲ್ಲ
ಇಂತಪ್ಪ ಲೋಕದಲ್ಲಿ ಹೆಣ್ಣುಭ್ರೂಣ ಹತ್ಯೆಗಿಳಿದು
ಕೊಲೆಗಡುಕಳಾಗಿಹಳೇ ಪ್ರಣವಶ್ರೀ ಪರಂಜ್ಯೋತಿಯೇ
ಹೆಣ್ಣು ಜಗದ ಕಣ್ಣಾಗಿ ಮರೆಯಲೆಂದು ಹರಸು

(ವಚನಜ್ಯೋತಿ, ವಚನಸಂಖ್ಯೆ – ೧೧೨, ಪುಟಸಂಖ್ಯೆ – ೬೩)

ಆಧುನಿಕ ದಿನಗಳಲ್ಲಿ ಹೆಣ್ಣುಮಗು ಹುಟ್ಟಿದ ಕೂಡಲೇ ಅವರ ತಂದೆ–ತಾಯಿಗಳು ಚಿಂತಾಕ್ರಾಂತರಾಗುತ್ತಾರೆ, ಕಣ್ಣೀರಿಡುತ್ತಾರೆ. ಆದರೆ ಅವರು ಆದಿಶಕ್ತಿ ಮಹಾತಾಯಿ ಹೆಣ್ಣು ಎಂಬುದನ್ನು ಮರೆಯುತ್ತಾರೆ. ಅಲ್ಲದೆ ತಮ್ಮನ್ನು ಹೆತ್ತವಳೂ ಒಬ್ಬ ಹೆಣ್ಣು ಅನ್ನುವುದನ್ನು ಮರೆಯುತ್ತಾರೆ. ಇಂತಹ ಪಕ್ಷಪಾತವೇಕೆ ಎಂದು ವಚನಕಾರ್ತಿಯರು ಪ್ರಶ್ನಿಸುತ್ತಾರೆ. ಆತ್ಮಕ್ಕೆ ಮತ್ತು ಸಾಧನೆಗೆ ಹೆಣ್ಣು–ಗಂಡುಗಳೆಂಬ ಭೇದಭಾವಗಳಿಲ್ಲ. ಸೃಷ್ಟಿಯಲ್ಲಿ ಎಲ್ಲರೂ ಒಂದೇ. ಹೆಣ್ಣನ್ನು ರಕ್ಷಿಸಬೇಕಾದ ತಾಯಿಯೇ ಹೆಣ್ಣು ಭ್ರೂಣಹತ್ಯೆಯಂತಹ ದುಷ್ಕೃತ್ಯಗಳಿಗೆ ಪ್ರೋತ್ಸಾಹ ನೀಡುವ ಮೂಲಕ ಕೊಲೆಗಡುಕಗಳಾಗಿದ್ದಾಳೆ. ಆದ್ದರಿಂದ ಪ್ರಣವಶ್ರೀ ಪರಂಜ್ಯೋತಿಯೇ ಹರಸು, ಹೆಣ್ಣು ಜಗತ್ತಿನ ಕಣ್ಣಾಗುವಂತೆ ಮಾಡು ಎಂದು ದೇವರಲ್ಲಿ ಮೊರೆಯಿಟ್ಟಿದ್ದಾರೆ.

"ಹೆಣ್ಣು ಬೇಡವೆಂದು ಭಂಡರು
ಭ್ರೂಣಹತ್ಯೆಗೆಯ್ಯುತ್ತಿಹರಯ್ಯ
ಹಣದಾಸೆಗೆ ಸಹಕರಿಸಿ ವೈದ್ಯರು
ಕೊಲೆಗಡುಕರಾಗಿಹರಯ್ಯ
ಹೆಂಗಳ ಸಂಖ್ಯೆ ಇಳಿಮುಖವಾಗಿಹುದಯ್ಯ
ಹೆಣ್ಣುಗಂಡುಗಳ ಹಂತರ ಅಜಗಜಾಂತವಾಗಿವುದಯ್ಯ

ಲಿಂಗಭೇದವ ಹೆಚ್ಚಿಸುತಿಹ ಅಜ್ಞಾನಿಗಳ
ಅಂಧಕಾರ ಅಳಿಸು ಪ್ರಣವಶ್ರೀ ಪರಂಜ್ಯೋತಿ"

(ವಚನಜ್ಯೋತಿ ವಚನಸಂಖ್ಯೆ - ೨೭, ಪುಟಸಂಖ್ಯೆ -೨೨ ಕೆ.ಎಸ್.ರತ್ನಮ್ಮ)

ಹೆಣ್ಣಿನ ಭ್ರೂಣಹತ್ಯೆ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿರುವುದು ತುಂಬಾ ಆತಂಕಕಾರಿಯಾದ ಬೆಳವಣಿಗೆಯಾಗಿದೆ. ಇದರಿಂದ ಇಡೀ ಮಾನವ ಸಮಾಜವೇ ತಲೆತಗ್ಗಿಸುವಂತಾಗಿದೆ. ಇದು ಸಾಂಕ್ರಾಮಿಕ ರೋಗದಂತೆ ಹರಡಿ ಇಡೀ ಮಾನವ ಕುಲವನ್ನೆ ನಾಶಮಾಡುವ ಹಂತ ತಲುಪಿದೆ. ಇದು ಕಳವಳಕಾರಿಯಾದ ಸಂಗತಿಯಾಗಿದೆ. ಇದು ಹಿಂದೂಧರ್ಮಕ್ಕೆ ಅಂಟಿದ ಒಂದು ಕಳಂಕವಾಗಿದೆ. ಹೆಣ್ಣನ್ನು ದೇವರೆಂದು ಪೂಜಿಸುವ ಈ ಪುಣ್ಯಭೂಮಿಯಲ್ಲಿ ಈ ಪರಿಸ್ಥಿತಿ ಬಂದಿರುವುದು ನಿಜಕ್ಕೂ ಖಂಡನೀಯವಾದ ಸಂಗತಿಯಾಗಿದೆ. ಇಂತಹ ಅನಿಷ್ಟ ಪದ್ಧತಿಯ ಹೇಯಕಾರ್ಯಗಳ ವಿರುದ್ಧ ಸಮಗ್ರವಾದ ಹೋರಾಟವನ್ನು ಮಾಡಿ ಮಾನವ ಸಮಾಜಕ್ಕೆ ಕಂಟಕಪ್ರಾಯವಾಗಿರುವ ಹೆಣ್ಣುಭ್ರೂಣಹತ್ಯೆಯ ಬಗೆಗೆ ಜನಸಾಮಾನ್ಯರಲ್ಲಿ ತಿಳುವಳಿಕೆಯನ್ನುಂಟುಮಾಡಿದ ವಚನಕಾರರಿಗೆ ಅಭಿನಂದನೆಗಳು ಸಲ್ಲುತ್ತವೆ. ತಲತಲಾಂತರಗಳಿಂದ ಬೇರುಬಿಟ್ಟಿದ್ದ ಗೊಡ್ಡು ಸಂಪ್ರದಾಯಗಳನ್ನು ಬೇರುಸಹಿತ ಕಿತ್ತುಹಾಕುವಂತೆ ಕರೆನೀಡಿದ್ದಾರೆ. ಅಲ್ಲದೆ ಇಷ್ಟ ಅನಿಷ್ಟಗಳ ಬಗ್ಗೆ ಮೊದಲು ತಂದೆ-ತಾಯಿಗಳು ಎಚ್ಚರದಿಂದಿರಬೇಕೆಂದು ತಿಳಿಸಿದ್ದಾರೆ. ಭವಿಷ್ಯದ ಜೀವನದಲ್ಲಿ ತುಂಬಾ ಕಷ್ಟಗಳನ್ನು ಎದುರಿಸಬೇಕಾದ ಪರಿಸ್ಥಿತಿಯನ್ನು ಮನಮುಟ್ಟುವಂತೆ ವಿವರಿಸಿದ್ದಾರೆ. ಯಾವ ತಪ್ಪು ಮಾಡದ ಹೆಣ್ಣಿನ ಮೇಲೆ ಈ ರೀತಿಯ ಅನ್ಯಾಯ ಮಾಡಬಾರದು ಎಂದಿದ್ದಾರೆ. ಹೆಣ್ಣುಬೇಡವೆಂದು ಭ್ರೂಣದಲ್ಲಿರುವಾಗಲೇ ಹತ್ಯೆಮಾಡುವಂತಹ ಪುರುಷರು ನಿಜಕ್ಕೂ ಭಂಡರು, ಹೇಡಿಗಳು. ಅಲ್ಲದೆ ಹಣದ ಮೇಲಿನ ದುರಾಸೆಯಿಂದ ವಿದ್ಯಾವಂತರೆನಿಸಿಕೊಂಡ ಆಸ್ಪತ್ರೆಯ ವೈದ್ಯರೇ ಇಂತಹ ಕೀಳುಮಟ್ಟದ ಕೆಲಸಕ್ಕೆ ಕೈಹಾಕುತ್ತಿರುವುದು ಬಹಳ ದುರಂತದ ಸಂಗತಿಯಾಗಿದೆ. ಸಮಾಜದಲ್ಲಿ ಗಣ್ಯರೆನಿಸಿದ ವ್ಯಕ್ತಿಗಳೇ ಸಮಾಜಬಾಹಿರ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ. ಇದರಿಂದ ಮುಂದಿನ ಸಮಾಜದ ಗತಿಯೇನು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಒಂದು ಆಶ್ಚರ್ಯದ ಸಂಗತಿಯೇನೆಂದರೆ ಹೆಣ್ಣು ಭ್ರೂಣಹತ್ಯೆ ನಿರಂತರವಾಗಿ ನಡೆಯುತ್ತಿದ್ದರೂ ರಾಜಕಾರಣಿಗಳು, ಜನಪ್ರತಿನಿಧಿಗಳು ಹಾಗೂ ಸಮಾಜದ ಬುದ್ಧಿಜೀವಿಗಳು ಚಕಾರವೆತ್ತದೆ ಇರುವುದನ್ನು ನೋಡಿ ವಚನಕಾರ್ತಿಯರು ಆಶ್ಚರ್ಯವ್ಯಕ್ತಪಡಿಸಿದ್ದಾರೆ. ಅಲ್ಲದೆ ಇದರಿಂದ ಮುಂದಾಗುವ ದುರಂತವನ್ನು ನೆನೆದು ಚಿಂತೆಗೀಡಾಗಿದ್ದಾರೆ. ಈ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿದ್ದಾರೆ.

"ಹೆಣ್ಣೆಂದು ಅಪಮಾನಕ್ಕೆರಿಸಿದಯ್ಯ
ಹೆಣ್ಣೆಂದು ಅನುಕೂಲಕ್ಕಾತರಿಸಿದರಯ್ಯ
ಹೆಣ್ಣೆಂದು ಬೀಳುಗಳೆದರಯ್ಯ
ಹೆಣ್ಣೆಂದು ಅಪವಾದ ಹರಡಿದರಯ್ಯ
ಹೆಣ್ಣೆಂದು ಬೆರಳೊಳಾಡ ಬಯಸುವ ಸೂತ್ರದ
ಬೊಂಬೆಯಾಗಿಸಲು ನೋಡಿದರಯ್ಯ
ಹೆಣ್ಣೊಂದು ಕಾಲಕಸವ ಮಾಡಿದರಯ್ಯ
ಪ್ರಣವಶ್ರೀ ಪರಂಜ್ಯೋತಿಯೊಲಿದಾತ್ಮವದು
ಹೆಣ್ಣು ಅಲ್ಲ ಗಂಡೂ ಅಲ್ಲ
ಪ್ರಣವತೆಯ ಮಡಿಲಬೆಳಕು ಕಾಣಿರೋ"

(ವಚನಜ್ಯೋತಿ, ಕೆ.ಎಸ್.ರತ್ನಮ್ಮ, ಪುಟ ಸಂಖ್ಯೆ – ೬೬, ವಚನಸಂಖ್ಯೆ –೧೦೮)

ವೈದಿಕ ಧರ್ಮವು ಹೆಣ್ಣನ್ನು ಅಸ್ಪೃಶ್ಯಳಂತೆ ಕಂಡಿತ್ತು ಋತುಚಕ್ರ ಅಪವಿತ್ರವೆಂದು ಕಲ್ಪಿಸಿ ಹೆಣ್ಣನ್ನು ಶೂದ್ರರ ಸಾಲಿಗೆ ಸೇರಿಸಲಾಗಿತ್ತು. ಈ ಕಾರಣದಿಂದ ಅವಳು ಮುಕ್ತಿಗೆ ಅನರ್ಹಳು, ಆಧ್ಯಾತ್ಮಿಕತೆಗೆ ಬಾಧಕಗಳು ಹಾಗೂ ವೇದಾಧ್ಯಯನ, ಮಂತ್ರಪಠಣ ಶ್ರವಣ ಇತ್ಯಾದಿ ಧಾರ್ಮಿಕ ಆಚರಣೆಗೆ ಅವಳನ್ನು ಅಪವಿತ್ರಳೆಂದು ಕರೆದು ಅನರ್ಹಗೊಳಿಸಲಾಗಿತ್ತು. ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ, ಚರಿತ್ರೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಪುರೋಹಿತಶಾಹಿಯ ಇಂತಹ ಹತ್ತು ಹಲವು ಅವೈಜ್ಞಾನಿಕ ವಿಚಾರಗಳಿಂದ ಶೋಷಣೆಗೆ ಸಿಲುಕಿ ನೈತಿಕ ಪ್ರಶ್ನೆಯ ಧ್ವನಿ ಎತ್ತುವ ಅವಕಾಶವೇ ಸ್ತ್ರೀಯರಿಗೆ ದೊರೆಯಲಿಲ್ಲ.

ಶರಣರು ಅಸಮಾನತೆಯಿಂದ ಕುಗ್ಗಿ ಹೋಗಿದ್ದ ಸ್ತ್ರೀಯರ ಶಕ್ತಿಯ ಅನನ್ಯತೆಯನ್ನು ಗುರುತಿಸಿದರು. ಸ್ತ್ರೀಯರಿಗೆ ಯಾವುದೇ ಬಗೆಯ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯವೇ ಇಲ್ಲದಿದ್ದ ಕಾಲದಲ್ಲಿ ಲಿಂಗ ವಯಸ್ಸುಗಳ ಭೇದವಿಲ್ಲದೆ ನ್ಯಾಯವಾಗಿ ಅವರಿಗೆ ಸಲ್ಲಬೇಕಾದ ಗೌರವವನ್ನು ಸಲ್ಲಿಸಿದರು. "ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರವಿಲ್ಲ, ಹೊಲೆಯುಂಟೇ ಲಿಂಗ ವಿದ್ದಡೆಯಲ್ಲಿ ಸತಿಭಕ್ತಿಯಾದರೆ ಹೊಲೆಗಂಜಲಾಗದು ಹೆಣ್ಣು ಹೆಣ್ಣಾದಡ ಗಂಡಿನ ಸೂಚಕ ಗಂಡು–ಗಂಡಾದರೆ ಹೆಣ್ಣಿನ ಸೂತಿಕ" ಎಂದು ಮನದ ಸೂತಕಗಳಿಂದ ಬಿಡುಗಡೆ ಮಾಡಿದರು. ಹೆಣ್ಣು–ಗಂಡುಗಳು ಮೇಲಿನ ಸಮಾನಶಕ್ತಿಯನ್ನು, ಆತ್ಮ–ಪ್ರಾಣ ಅರಿವುಗಳೆಂಬ ಪದಗಳಿಂದ ಸೂಚಿಸುವ ಶರಣೆಯರು ಶರೀರ ಜನ್ಮ ವ್ಯತ್ಯಾಸಗಳನ್ನು ನಿರಾಕರಿಸಿದರು. ಸ್ತ್ರೀಯರಿಗೆ ಸಹಭಾಗಿತ್ವನೀತಿ, ಗುರುಜಂಗನು ಲಿಂಗಪೂಜೆ ಆತ್ಯಾವರಣ ಪಂಚಾಚಾರ, ಪಾಲನೆ, ಷಟ್‌ಸ್ಥಳ, ಸಾಧನೆಶಿವಯೋಗ, ಧೀಕ್ಷೆ ಪಡೆಯುವ ಧಾರ್ಮಿಕ ಸ್ವಾತಂತ್ರ್ಯವನ್ನು ಕಲ್ಪಿಸಿಕೊಟ್ಟರು.

ಆಡುಮುಟ್ಟದ ಸೊಪ್ಪಿಲ್ಲ ಎಂಬಂತೆ ಅವರು ಗುರುತಿಸದ ಸಮಸ್ಯೆಗಳಿಲ್ಲ, ಅಲ್ಲದೆ ಅವರು ಮಾಡದ ವಿಡಂಬನೆಗಳಿಲ್ಲ ಆಧುನಿಕ ಸ್ತ್ರೀಯರ ಎಲ್ಲ ಸಮಸ್ಯೆಗಳ ಕಡೆಗೆ ಬೆಳಕು ಚೆಲ್ಲುತ್ತಾ ಕಷ್ಟದ ಎಲ್ಲ ಬಗೆಯ ಸ್ವರೂಪವನ್ನು ಅವರು ಮನೋಜ್ಞವಾಗಿ ಅನಾವರಣಗೊಳಿಸಿದ್ದಾರೆ. ಆ ಮೂಲಕ ಮಹಿಳೆಯರ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಿದ್ದಾರೆ. ಅತ್ತೆ–ಸೊಸೆಯರ ಜಗಳ ಅದರಿಂದುಂಟಾಗುವ ಸಾಮಾಜಿಕ ಸಮಸ್ಯೆಗಳ ಕಡೆಗೆ ಗಮನಹರಿಸಿದ್ದಾರೆ. ಆಧುನಿಕ ವಚನಕಾರ್ತಿಯರಾದ ರಾಜೇಂದ್ರಶಿಶುರವರ ಒಂದು ವಚನವನ್ನು ಇಲ್ಲಿ ಕಾಣಬಹುದು.

"ಅನುದಿನ ಜಗಳವಾಡುವ ಅತ್ತೆ ಸೊಸೆಯರ
ತಿದ್ದುವವರಾರಯ್ಯ
ತನ್ನ ಮನೆಯ ಉದ್ದರಿಸಲು ಇಚ್ಛಿಸದ ಸ್ತ್ರೀಯರ ತಿದ್ದುವರ್ಯಾರು"

(ಡಾ.ಕೆ.ಎಸ್.ರತ್ನಮ್ಮ ವಚನ ಸಾಹಿತ್ಯ ಸಂಚಯ)

"ಬೇಲಿ ಎದ್ದು ಹೊಲಮೇಯ್ದಂತೆ
ತನ್ನ ಮನೆ ಕಿಚ್ಚು ತನ್ನ ಸುಟ್ಟಂತೆ
ಎನುತಿಹರು ಶಿವರಾತ್ರಿ ರಾಜೇಂದ್ರರು"

(ವಚನೋದ್ವಯ ರಾಜೇಂದ್ರ ಶಿಶು)

ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಗಾದೆ ಬಹಳ ಜನಪ್ರಿಯವಾದುದು ಸ್ತ್ರೀಯರು ಪುರುಷರಿಂದ ದೌರ್ಜನ್ಯಕ್ಕೆ ಒಳಗಾಗುವುದಕ್ಕಿಂತಲೂ ಹೆಚ್ಚಾಗಿ ಒಂದು ಹೆಣ್ಣು ಮತ್ತೊಂದು ಹೆಣ್ಣಿನಿಂದಲೇ, ಶೋಷಣೆಗೆ, ದಬ್ಬಾಳಿಕೆ, ದೌರ್ಜನ್ಯ, ಅನ್ಯಾಯಕ್ಕೆ ಒಳಗಾಗಿದ್ದಾಳೆ ಎಂಬುದನ್ನು ರಾಜೇಂದ್ರ ಶಿಶುರವರು ಬಹಳ ಅರ್ಥಪೂರ್ಣವಾಗಿ ಸಮಾಜಕ್ಕೆ ತಿಳಿಹೇಳಿದ್ದಾರೆ. ಸ್ತ್ರೀಯರಿಗೆ ಮತ್ತೊಬ್ಬ ಸ್ತ್ರೀಯರನ್ನು ಕಂಡರೆ ಆಗುವುದಿಲ್ಲ. ಪರಸ್ಪರರಿಬ್ಬರೂ ಒಬ್ಬರನ್ನೊಬ್ಬರು ದೂಷಿಸುತ್ತಾರೆ, ವಿಷಕಾರುತ್ತಾರೆ. ಆದ್ದರಿಂದ ಸ್ತ್ರೀಯರು ಇನ್ನೊಬ್ಬ ಸ್ತ್ರೀಯರನ್ನು ಕಂಡಾಗ ಅವರನ್ನು ದ್ವೇಷಿಸುವುದನ್ನು ಬಿಡಬೇಕು ಹಾಗೂ ಪರಸ್ಪರ ದಯೆ, ಪ್ರೀತಿ, ಕರುಣೆ, ಸಹಾಯ, ಸಹಕಾರ, ತ್ಯಾಗ, ಆದರತೆಗಳನ್ನು ತೋರಿಸುವುದರ ಮೂಲಕ ಶಾಂತಿ, ಸುಖೀ ಸಮಾಜದ ಸ್ಥಾಪನೆಗೆ ಅಡಿಗಲ್ಲಾಗಬೇಕು ಎಂದು ಪ್ರಾರ್ಥಿಸಿದ್ದಾರೆ.

ಸೊಸೆಯ ಮೇಲೆ ದಯೆ, ಪ್ರೀತಿ, ಕರುಣೆ ತೋರಿಸಿ ಸೊಸೆಯ ಬಾಳಿನಲ್ಲಿ ಬೆಳಕಾಗಬೇಕಾದ ಅತ್ತೆಯೇ ಸಮಾಜದಲ್ಲಿ ದ್ವೇಷದಿಂದ ಕಂಡರೆ ಅವಳ ಬಾಳನ್ನು ಹಾಳು ಮಾಡಿದರೆ ಸೊಸೆಯ ಗತಿಯೇನು?

ಎಂಬ ಪ್ರಶ್ನೆಯಿದೆ. ಪ್ರತಿದಿನ ಬೆಳಗಾದ ತಕ್ಷಣ ಅತ್ತೆ, ಸೊಸೆಯರು ತಮ್ಮ ಮನೆಗಳಲ್ಲಿ ಅಧಿಕಾರಕ್ಕಾಗಿ ಜಗಳವಾಡುವುದು, ದ್ವೇಷಸಾಧಿಸುವುದು ಇಂದು ತೀರ ಸಾಮಾನ್ಯವಾದ ಸಂಗತಿಯಾಗಿದೆ. ಆದ್ದರಿಂದ ಅತ್ತೆ–ಸೊಸೆಯರಿಬ್ಬರು ಪರಸ್ಪರ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಬಹಳ ಅನ್ಯೋನ್ಯತೆಯಿಂದ ಬಾಳಬೇಕೆಂಬ ಆಶಯ ಇಲ್ಲಿದೆ. ಇವರಿಬ್ಬರೂ ಪರಸ್ಪರ ಸಮಾನರು ಆದ್ದರಿಂದ ಇಬ್ಬರೂ ಬೆರೆತು ಬಾಳಿದರೆ ಸ್ವರ್ಗ ಸುಖವಿದೆ ಎಂಬ ಅಂಶವನ್ನು ಮನಗಾಣಬಹುದಾದ ಅಗತ್ಯವಿದೆ. ಅನುದಿನವೂ ಅತ್ತೆ–ಸೊಸೆಯರಿಬ್ಬರು ಪರಸ್ಪರ ಜಗಳವಾಡಿದರೆ ಅವರನ್ನು ತಿದ್ದುವವರ್ಯಾರು? ಅವರನ್ನು ಸರಿದಾರಿಗೆ ತರುವವರಾರು? ಏಕೆಂದರೆ ಪ್ರತಿಯೊಂದು ಮನೆಯ ಭವಿಷ್ಯ ಮತ್ತು ಅಭಿವೃದ್ಧಿ ಅತ್ತೆ ಸೊಸೆಯನ್ನು ಅವಲಂಬಿಸಿರುತ್ತದೆ ಎಂಬುದನ್ನು ಮರೆಯಬಾರದು. ಅತ್ತೆ ಸೊಸೆಯರು ಆ ಮನೆಯ ಎರಡು ಆಧಾರ ಸ್ಥಂಭಗಳಿದ್ದಂತೆ ಹಾಗೂ ಆ ಮನೆಯ ಎರಡು ಕಣ್ಣುಗಳಿದ್ದಂತೆ. ಯಾವುದೇ ಒಂದು ಮನೆ ಸುಭದ್ರವಾಗಿರಬೇಕಾದರೆ ಇವರಿಬ್ಬರಲ್ಲಿ ಅನ್ಯೋನ್ಯವಾದ, ಆತ್ಮೀಯವಾದ, ಗೌರವಪೂರ್ಣ ಸಂಬಂಧವಿರಬೇಕಾಗುತ್ತದೆ. ಇಲ್ಲದಿದ್ದರೆ ಆ ಮನೆಯ ಭಿವಿಷ್ಯವೇ ಬೀದಿಪಾಲಾಗುತ್ತದೆ. ಮನೆ ಒಡೆದು ಛಿದ್ರವಾಗುತ್ತದೆ. ಆ ಮೂಲಕ ಮನೆಯ ನೆಮ್ಮದಿ ಸಂತೋಷ ಹಾಳಾಗುತ್ತದೆ. ತನ್ನ ಮನೆಯನ್ನು ಬೆಳೆಸುವ ಮತ್ತು ಮುಂದುವರಿಸುವ ಜವಾಬ್ದಾರಿ ಈ ಇಬ್ಬರು ಹೆಣ್ಣುಮಕ್ಕಳನ್ನು ಅವಲಂಬಿಸಿರುತ್ತದೆ. ಆದರೆ ತನ್ನ ಮನೆಯನ್ನು ಉದ್ಧರಿಸಲು ಇಚ್ಛೆಪಡದ ಸ್ತ್ರೀಯರನ್ನು ತಿದ್ದುವರಾರಯ್ಯ? ಹಾಗೆ ಮಾಡಿದ್ದೇ ಆದರೆ ಬೇಲಿಯೇ ಎದ್ದು ಹೊಲಮೇಯ್ದಂತೆ ಆಗುತ್ತದೆ.

ಅತ್ತೆ–ಸೊಸೆಯರ ಜಗಳದಿಂದಾಗಿ ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ಕಣ್ಮರೆಯಾಗಿ ಎಲ್ಲೆಲ್ಲೂ ವಿಭಕ್ತ ಕುಟುಂಬಗಳು ತಲೆ ಎತ್ತಿವೆ. ಮನುಷ್ಯ ಇಂದು ಆಧುನಿಕ ಜೀವನ ಶೈಲಿಯ ಭರಾಟೆಯಲ್ಲಿ ಮುಳುಗಿ ಬಾಳಿನ ನೆಮ್ಮದಿಯನ್ನೇ ಕಳೆದುಕೊಂಡಿದ್ದಾನೆ. ಆಧುನಿಕ ಜೀವನದಲ್ಲಿ ಮಾನವೀಯ ಮೌಲ್ಯಗಳು ಕುಸಿಯುತ್ತಿರುವುದರಿಂದ ಮಾನವಸಂಬಂಧಗಳಿಗೆ ಬೆಲೆಯಿಲ್ಲದಂತಾಗಿದೆ. ಅತ್ತೆ–ಸೊಸೆಯರೇನಾದರೂ ಅಂಗವಿಕಲರು ಬುದ್ಧಿಮಾಂದ್ಯರು ಆಗಿದ್ದರಂತೂ ಅವರ ಗೋಳನ್ನು ಕೇಳುವವರೇ ಇಲ್ಲದಂತಾಗುತ್ತದೆ.

'ಅತ್ತೆಗೊಂದು ಕಾಲ ಸೊಸೆಗೊಂದು ಕಾಲ' ಎಂಬಂತೆ ಆಗಿದೆ. ಸೊಸೆ ಆರಂಭದಲ್ಲಿ ಮದುವೆಯಾಗಿ ಬಂದಾಗ ಅತ್ತೆ–ನೀಡಿದ ತೊಂದರೆ ಹಾಗೂ ಕಿರುಕುಳವನ್ನು ಮನಸ್ಸಿನಲ್ಲಿಟ್ಟುಕೊಂಡು ಆ ದ್ವೇಷವನ್ನು ಮುಂದಿನ ದಿನಗಳಲ್ಲಿ ತೀರಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಹೀಗೆ ಇದರ ಪರಂಪರೆಯೇ ಮುಂದುವರಿಯುತ್ತದೆ ಎನ್ನಬಹುದು.

ಅತ್ತೆ–ಸೊಸೆಯ ಜಗಳದಿಂದಾಗಿ ಮನೆಯ ಯಜಮಾನನ ನೆಮ್ಮದಿ ಕೆಡುತ್ತದೆ. ತಾಯಿ ಮತ್ತು ಹೆಂಡತಿಯ ಮದ್ಯೆ, ಕತ್ತರಿ ಬಾಯಲ್ಲಿ ಅಡಿಕೆ ಸಿಕ್ಕಿ ಹಾಕಿಕೊಂಡಂತೆ. ಈ ಇಬ್ಬರ ಮಧ್ಯೆ ಸಿಕ್ಕಿಕೊಂಡು ನರಳುವಂತಾಗುತ್ತದೆ. 'ತಂದೆ–ತಾಯಿಗಳ ಜಗಳದಲ್ಲಿ ಕೂಸು ಬಡವಾಯ್ತು' ಎಂಬ ಗಾದೆಯಂತೆ ಅತ್ತೆ–ಸೊಸೆಯರ ಜಗಳದಿಂದ ಮನೆಯ ಯಜಮಾನ ಬಡವನಾಗುತ್ತಾನೆ. ಇದು ಮುಂದೆ ದೊಡ್ಡ ದುರಂತಕ್ಕೂ ಕಾರಣವಾಗುತ್ತದೆ.

ಆದ್ದರಿಂದ ಅತ್ತೆ–ಸೊಸೆಯರು ಪರಸ್ಪರ ಸಹಕಾರದಿಂದಿರಬೇಕು ಏಕೆಂದರೆ ಕುಟುಂಬದಲ್ಲಿ ಇವರ ಹಿತವೂ ಅಡಗಿದೆ. ಇಲ್ಲದಿದ್ದರೆ ಇಬ್ಬರ ಭವಿಷ್ಯವು ಹಾಳಾಗುತ್ತದೆ ಎಂಬುದರಲ್ಲಿ ಯಾವ ಸಂದೇಹವಿಲ್ಲ. ಏಕೆಂದರೆ ಬೆಂಕಿಯು ಮೊದಲು ತನ್ನ ಮನೆಯನ್ನು ಸುಡುತ್ತದೆಯೇ ವಿನಹ ಬೇರೆ ಮನೆಯನ್ನಲ್ಲ ಎಂಬ ಸರ್ವಕಾಲಿಕ ಸತ್ಯವನ್ನು ಅರ್ಥಮಾಡಿಕೊಂಡು ಜೀವನವನ್ನು ಸಾಗಿಸಬೇಕು. ಆ ಮೂಲಕ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಅಭಿಲಾಷೆ ವ್ಯಕ್ತವಾಗಿದೆ. 'ಕೂಡಿಬಾಳಿದರೆ ಸ್ವರ್ಗಸುಖ ಇಲ್ಲವಾದರೆ ಬದುಕೇ ನರಕವಾಗಿ ಹೋಗುತ್ತದೆ' ಎಂಬ ಪರೋಕ್ಷ ಎಚ್ಚರಿಕೆಯನ್ನು ವಚನಕಾರ್ತಿಯರು ನೀಡಿದ್ದಾರೆ.

**೩) ಸಾಮಾಜಿಕ ಸ್ವಾಸ್ಥ್ಯ:–**

ಹನ್ನೆರಡನೇ ಶತಮಾನದ ಪ್ರಮುಖ ವಚನಕಾರರಾದ ದೇವರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಆಯ್ದಕ್ಕಿ ಲಕ್ಕಮ್ಮ ಮುಂತಾದವರು ಕಾಯಕ ತತ್ವಕ್ಕೆ ನೀಡಿದ ಪ್ರಾಮುಖ್ಯತೆಯನ್ನು ಆಧುನಿಕ ವಚನಕಾರ್ತಿಯರೂ ನೀಡಿದ್ದಾರೆ. ಆಧುನಿಕ ವಚನಕಾರ್ತಿಯರಾದ ವಾಣಿ, ರತ್ನಮ್ಮ, ಕೆ.ಎಸ್.ಪ್ರೇಮಲೀಲಾ ರಾಜೇಂದ್ರಶಿಶು, ಶಾಂತಾಜಗದೀಶ್, ಅನ್ನಪೂರ್ಣ ಮುಂತಾದವರು ಕಾಯಕ ತತ್ವಕ್ಕೆ ಮೊದಲ ಪ್ರಾಶಸ್ತ್ರಯವನ್ನು ನೀಡಿದ್ದಾರೆ. ಹಾಗೂ ತಮ್ಮ ವಚನಗಳಲ್ಲಿ ಕಾಯಕ ತತ್ವದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾರೆ. ಅಂತೆಯೇ ತಮ್ಮ ಜೀವನದಲ್ಲಿ ಕಾಯಕ ತತ್ವವನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಿದ್ದಾರೆ. ಇವರ ನಡೆ–ನುಡಿ ಎರಡೂ ಒಂದೇ ಆಗಿವೆ ಆದ್ದರಿಂದಲೇ ಆಧುನಿಕ ವಚನಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆತಿದೆ ಎಂದು ಹೇಳಬಹುದು. ಈ ವಚನ ಸಾಹಿತ್ಯದಲ್ಲಿ ಕಾಯಕ ತತ್ವ ಅವಿಭಾಜ್ಯ ಅಂಗವಾಗಿದೆ. ಅದೇ ಅದರ ಜೀವಾಳವಾಗಿದೆ. ವಚನ ಸಾಹಿತ್ಯದ ಶ್ರೇಷ್ಠ ಮೌಲ್ಯಗಳಲ್ಲಿ ಕಾಯಕ ತತ್ವವೂ ಒಂದಾಗಿದೆ.

"ವಿಶ್ವವೇ ಒಂದು ನಿನ್ನ ಗುಡಿಯಾದರೆ
ಇಲ್ಲಿ ಓಡಾಡುವುದೇ ಪ್ರದಕ್ಷಿಣೆ
ಕಾಯಕವೇ ಪೂಜೆ ರೊಟ್ಟಿಯೇ

ಪ್ರಸಾದ, ಜಲವೇ ತೀರ್ಥ ಆನಂದ ಸಿಂಧು
ನಿನ್ನ ಸ್ಪರ್ಶವೇ ತುಂಬಿರುವುದರಿಂದ
ಇಲ್ಲಿರುವುದೆಲ್ಲಾ ನಿನ್ನ ಪ್ರಸಾದ ಶುದ್ಧ
ಜಲವೇ ಪಾವನ ತೀರ್ಥ ಆನಂದ ಸಿಂಧು"

(ಆನಂದಸಿಂಧು–ಅನ್ನಪೂರ್ಣ ವಚನಸಂಖ್ಯೆ–೧೨೦, ಪುಟಸಂಖ್ಯೆ.೧೨೨)

ನಿರಾಕಾರ ನಿರಂಜನನಾದ ಶಿವನು, ಭಗವಂತನು ವಿಶ್ವವ್ಯಾಪಿಯಾದವನು. ಅವನು ಜಗತ್ತಿಗೇ ಗುರುವಾಗಿದ್ದಾನೆ. ಎಲ್ಲ ದುಷ್ಟ ಶಕ್ತಿಗಳನ್ನು ನಿಯಂತ್ರಿಸುವ ಶಕ್ತಿ ಮತ್ತು ಸಾಮರ್ಥ್ಯ ಉಳ್ಳವನಾಗಿದ್ದಾನೆ. ಅಲ್ಲದೆ ಈ ಜಗತ್ತು ಸೃಷ್ಟಿಯಾಗಿರುವುದೇ ಶಿವನಿಂದ. ಈ ಶಿವನೇ ಜಗತ್ತಿನ ಒಡೆಯ. ಅವನೇ ವಿಶ್ವೇಶ್ವರ, ಸರ್ವೇಶ್ವರನೂ ಆಗಿದ್ದಾನೆ. ಆದ್ದರಿಂದ ದೇವರಿಗೆ ಪ್ರಪಂಚವೇ ಒಂದು ಗುಡಿಯಾಗಿದೆ. ಇಲ್ಲಿ ನಾವು ಓಡಾಡುವುದೇ ಪ್ರದಕ್ಷಿಣೆಯಾಗಿದೆ, ಕಾಯಕವೇ ಪೂಜೆಯಾಗಿದೆ.

ಮನುಷ್ಯ ತಾನು ಮಾಡುವ ಎಲ್ಲಾ ಕಾಯಕದಲ್ಲಿಯೂ ದೇವರು ಅಡಗಿರುತ್ತಾನೆ. ಆದ್ದರಿಂದ ಯಾವುದೇ ಕೆಲಸವನ್ನು ಮಾಡಬೇಕಾದರೂ ಬಹಳ ಶ್ರದ್ಧೆ ನಿಷ್ಠೆ ಮತ್ತು ಭಕ್ತಿಯಿಂದ ನಿಸ್ವಾರ್ಥದಿಂದ ಮಾಡಬೇಕು. ಇಲ್ಲದಿದ್ದರೆ ಯಾವ ಕಾರ್ಯವೂ ಫಲನೀಡಲಾರದು. ಅಲ್ಲದೆ ನಿರೀಕ್ಷಿತ ಯಶಸ್ಸು ಕಾಣಲಾರದು. ಆದ್ದರಿಂದ ಮನುಷ್ಯ ತಾನು ಮಾಡಿದ ಕರ್ಮದ ಫಲವನ್ನು ಉಣ್ಣಲೇಬೇಕು. ಆದ್ದರಿಂದ ಕಾಯಕ ದೇವರ ಕೆಲಸದಷ್ಟೇ ಶ್ರೇಷ್ಠ ಮತ್ತು ಪವಿತ್ರವಾದುದು ಎಂದು ಭಾವಿಸಿ ಕಾರ್ಯ ನಿರ್ವಹಿಸಿದರೆ ಮಾತ್ರ ನಮ್ಮ ಕಾರ್ಯದಲ್ಲಿ ಜಯ ದೊರೆಯುತ್ತದೆ.

'ಮಾಡಿದುಣ್ಣೋ ಮಹರಾಯ' ಎಂಬ ಗಾದೆಯಂತೆ ಮನುಷ್ಯ ಒಳ್ಳೆಯ ಕಾರ್ಯ ಮಾಡಿದರೆ ಒಳ್ಳೆಯ ಪ್ರತಿಫಲವನ್ನು ಪಡೆಯುತ್ತಾನೆ. ಹಾಗೆಯೇ ಕೆಟ್ಟ ಕಾರ್ಯ ಮಾಡಿದರೆ ಕೆಟ್ಟ ಪ್ರತಿಫಲವನ್ನು ಉಣ್ಣಬೇಕಾಗುತ್ತದೆ. ಆದ್ದರಿಂದಲೇ ಬಸವಣ್ಣನವರು ಕಾಯಕವೇ ಕೈಲಾಸ ಎಂಬ ನೀತಿಯನ್ನು ಜಗತ್ತಿಗೇ ಸಾರಿ ಹೇಳಿದ್ದಾರೆ. ಕಾಯಕದಲ್ಲಿ ಕೀಳು, ಮೇಲು ಎಂಬುದಿಲ್ಲ, ಕಾಯಕದಲ್ಲಿ ತಾರತಮ್ಯವಿಲ್ಲ. ಮನುಷ್ಯನಾಗಿ ಹುಟ್ಟಿದ ಮೇಲೆ ಪ್ರತಿಯೊಬ್ಬರೂ ಒಂದಲ್ಲಾ ಒಂದು ರೀತಿಯ ಕಾಯಕವನ್ನು ಮಾಡಲೇಬೇಕಾಗುತ್ತದೆ. ಕೆಲಸ ಮಾಡದೇ ಉಣ್ಣುವಂತಿಲ್ಲ. ಇದು ನಮ್ಮ ಧರ್ಮದ ಸಿದ್ಧಾಂತವೂ ಆಗಿದೆ. ಆದ್ದರಿಂದ ಪ್ರತಿಯೊಬ್ಬ ಮನುಷ್ಯ ತನಗೆ ಬೇಕಾದ ಅಗತ್ಯ ಸೌಲಭ್ಯಗಳನ್ನು ಹಾಗೂ ಆಹಾರ ಪದಾರ್ಥಗಳನ್ನು ತಾನೇ ಸ್ವತಃ ದುಡಿದು ಸಂಪಾದಿಸಿಕೊಂಡು ಬದುಕಬೇಕೆಂಬುದು ಆಧುನಿಕ ವಚನಕಾರ್ತಿಯರ ಅಭಿಪ್ರಾಯವಾಗಿದೆ.

ಆದ್ದರಿಂದ ಮಾಡುವ ಕಾರ್ಯ ಉತ್ತಮವಾಗಿರಬೇಕು, ಶ್ರೇಷ್ಠವಾಗಿರಬೇಕು. ಅದು ಲೋಕಕಲ್ಯಾಣಕ್ಕೆ ಸಂಬಂಧಿಸಿದ್ದಾಗಿರಬೇಕು. ಹಾಗೆ ಮಾಡಿದ ಕಾರ್ಯ ದೇವರಿಗೆ ಪ್ರಿಯವಾಗುತ್ತದೆ. ಅದು ಭಗವಂತನಿಗೆ ಅರ್ಪಿತವಾಗುತ್ತದೆ. ಅದೇ ಮುಂದೆ ದೇವರಿಗೆ ಪೂಜೆಯಾಗಿ ಪರಿಣಮಿಸುತ್ತದೆ. ಆದ್ದರಿಂದಲೇ ಆಧುನಿಕ ವಚನಕಾರ್ತಿಯರು ಕಾಯಕ ತತ್ವದ ಪ್ರಾಮುಖ್ಯತೆಯನ್ನು ಎತ್ತಿಹಿಡಿದಿದ್ದಾರೆ.

"ಕಲ್ಲಿನಂತೆ ಜಡವಾಗಿದ್ದ ನಮ್ಮನ್ನು
ಸುಂದರ ಮೂರ್ತಿಯನ್ನಾಗಿ ಕಡೆದವನೇ?
ಅಜ್ಞಾನ ಕೂಪದಲ್ಲಿ ಮುಳುಗಿದ್ದ ನಮ್ಮನ್ನು
ಜ್ಞಾನ ದೀಪ್ತಿಗಳಾಗಿಸಿದವನೆ"

"ದುಃಖ ದುಗಡದಿ ಮುಳುಗಿದ್ದ ನಮ್ಮನು
ಸುಖದ ಹೊನಲಿನಲಿ ತೇಲಿಸಿದವನೇ
ಜಗದ ನೋವಿಗೆ ಸ್ಪಂದಿಸಿ ನಲಿವಿಗೆ ನಲಿದು

ಕಾಯಕ ತಪಸ್ವಿಯಾಗಿ ಜಗಬೆಳಗಿದ ಶಿವರಾತ್ರಿ
ರಾಜೇಂದ್ರ ಗುರುವು"

(ಆನಂದಸಿಂಧು, ಅನ್ನಪೂರ್ಣ ವಚನಸಂಖ್ಯೆ–೧೧೮)

ಈ ಮೇಲಿನ ವಚನವನ್ನು ಗಮನಿಸಿದರೆ ಆಧುನಿಕ ವಚನಕಾರ್ತಿಯರು ಕಾಯಕಕ್ಕೆ ಎಷ್ಟು ಮಹತ್ವ ನೀಡಿದ್ದಾರೆಂದು ನಮಗೆ ಅರ್ಥವಾಗುತ್ತದೆ.

ಕೆಲವು ಶರಣೆಯರಿಗೆ ಕಾಯಕವೇ ವ್ರತ. ಎಲ್ಲ ಕಾಲಕ್ಕೂ ಅಗತ್ಯವಾದ ಇಂತಹ ಸಾರ್ವಕಾಲಿಕ ವ್ರತಮೌಲ್ಯ ಅಂದಿನ ಶರಣೆಯರು ಜಗತ್ತಿಗೆ ನೀಡಿದ ಶ್ರೇಷ್ಠ ಕೊಡುಗೆ. ಕದಿರ ಕಾಯಕದ ಕಾಳವ್ವೆ ಎಂಬ ಶರಣೆಗೆ ನೂಲು ತೆಗೆಯುವ ರಾಟೆಯೇ ಸರ್ವಸ್ವ. ಕದಿರು ಮುರಿಯ ಏನೂ ಇಲ್ಲ, ವ್ರತ ಹೀನರ ನೆರೆಯಲೊಲ್ಲೆ ಗುಹೇಶ್ವರಾ ಎಂಬ ಕಾಳವ್ವೆಗೆ ಕದಿರು ಮುರಿದರೆ ಕಾಯಕವಿಲ್ಲದೆ ಜೀವನವೇ ಶೂನ್ಯ ಎಂಬ ಅಭಿಪ್ರಾಯ. ಕುಂಬಾರ ಗುಂಡಯ್ಯನ ಪತ್ನಿ ಕೇತಲದೇವಿಗೆ ಹದಮಣ್ಣಿಲ್ಲದೆ ಮಡಿಕೆಯಾಗಲಾರದು. ವ್ರತ ಹೀನರನು ಬೆಳೆಯಲಾಗದು ಬೆರೆದರೆ ನರಕತಪ್ಪದು ಎಂಬ ದೃಢನಂಬಿಕೆ. ಹದ ಮಣ್ಣು ಮಡಕೆ ಮಾಡಲು ಅಗತ್ಯ ಜೀವನ ಸಾರ್ಥಕತೆಗೆ ಕಾಯಕ ವ್ರತವು ಮುಖ್ಯ ಎಂಬ ಜೀವನ ಸತ್ಯಾದರ್ಶವಿದೆ. ಇದು ಸಾಮಾನ್ಯ ಮಹಿಳೆಯರ ಜೀವನ ಧೋರಣೆಯ ಪ್ರಸ್ತುತತೆ ಹಾಗೂ ಪಾವಿತ್ರ್ಯತೆಯನ್ನು ತಿಳಿಯಪಡಿಸುತ್ತದೆ.

ಇಂಥವರ ಪೈಕಿ ಕೊಟ್ಟಣ ಎಂದರೆ ಭತ್ತ ಕುಟ್ಟುವ ಕಾಯಕದ ಸೋಮವ್ವೆ ಎಂಬ ಶರಣೆಯ ನಿಲುವು ವಿಶಿಷ್ಟವಾದುದು. ಕುಟ್ಟುವ ಕಾರ್ಯದಿಂದ ಒಂದನ್ನು ಪಡೆದು ಗುರುಲಿಂಗ ಜಂಗಮ ಸೇವೆಗೆ ವಿನಿಯೋಗಿಸಬೇಕೆಂಬ ದಾಸೋಹ ವ್ರತ ಈಕೆಯದು. ಈ ವ್ರತದಲ್ಲಿ ಒಂದು ನಿಷ್ಠೆಯನ್ನು ಕೆಳಗಿನ ವಚನದಲ್ಲಿ ವ್ಯಕ್ತಪಡಿಸಿದ್ದಾರೆ.

'ಹದತಪ್ಪಿ ಕುಟ್ಟುವ ನುಚ್ಚಲ್ಲದೆ ಅಕ್ಕಿಯಿಲ್ಲ
ವ್ರತ ಹೀನನ ನೆರೆಯನನರಕವಲ್ಲದೆ ಮುಕ್ತಿಯಿಲ್ಲ
ಅರಿಯದವರು ಹೋಗಲಿ
ಅರಿದುಬೆರೆದನಾದಡೆಕಾದ ಕತ್ತಿಯಿಲ್ಲ
ಕಿವಿಯ ಕೊಯ್ವರಯ್ಯ ಒಲ್ಲೆ ಒಲ್ಲೆನಾಗಿ ನಿಮ್ಮೊಳಗೆ"
ನಿರ್ಲಜ್ಜೇಶ್ವರಾ.....

(ಡಾ. ಕೆ.ಎಸ್. ರತ್ನಮ್ಮ- ವಚನಸಾಹಿತ್ಯ ಸಂಚಯ)

ಕಾಯಕದಲ್ಲಿ ಶ್ರದ್ಧೆ, ನಿಷ್ಠೆ ಅಗತ್ಯ. ಶ್ರದ್ಧೆಯಿಲ್ಲದೆ ಹೇಗೋ ಕುಟ್ಟಿದ್ದರ ಭತ್ತದ ಸಿಪ್ಪೆ ಕಳೆದು ಅಕ್ಕಿಯು ಹೊರಬರುವ ಮುನ್ನವೇ ನುಚ್ಚಾಗುತ್ತದೆ. ಈ ನುಚ್ಚಿನಿಂದ ಅನ್ನ ಮಾಡಲು ಆಗದು, ಅದು ಗಂಜಿಯಾಗುತ್ತದೆ. ಆದರೆ ಗಂಜಿಗೆ ಅನ್ನದ ಸ್ಥಾನಮಾನ ದೊರೆಯಲಾರದು. ಅದೇ ರೀತಿ ಶಿವಭಕ್ತನು ಹದವಾದ ಅನ್ನವಿದ್ದಂತೆ. ವ್ರತಹೀನನು ಗಂಜಿಯಂತೆ ಎಂಬ ಅರ್ಥಪೂರ್ಣ ದೃಷ್ಟಾಂತ ನೀತಿ ಸಂಹಿತೆಯನ್ನು ಬೋಧಿಸಿದ್ದಾಳೆ. ಕಾಯಕವಿಲ್ಲದವರು, ಭಕ್ತಿ, ಸತ್ಯ, ಶುದ್ಧವಿಲ್ಲದುದು, ಕಾಯಕವಲ್ಲ ಎಂಬ ದರ್ಶನ ಕಾಳವ್ವೆಯದು ಆವ ಕಾಯಕವ ಮಾಡಿದರೂ ಒಂದೇ ಕಾಯಕವಯ್ಯ ಎಂಬ ನಿಲುವು ಹಾದರದ ಕಾಯಕದ ಮಾರಯ್ಯನವರ ಪೂರ್ಣ ಸ್ತ್ರೀ ಗಂಗಮ್ಮನ ದೃಷ್ಟಿ ಸೂಳೆ ಸಂಕವ್ವೆಗೂ ವ್ರತಹೀನನ್ನು ಬೆರೆಯಲೊಲ್ಲೆ ಎಂಬ ವ್ರತ ನಿಷ್ಠೆ ಹೀಗೆ ತಾವು ಕೈಗೊಂಡ ವ್ರತನಿಷ್ಠೆಯ ಬಗ್ಗೆ ಹೇಳುವ ಅದು ತಪ್ಪಿದರೆ ಏನುಶಿಕ್ಷೆ ಎಂಬುದನ್ನು ತಿಳಿಸುವ ಮೂಲಕ ಅನಿಸಿದ್ದನ್ನು ನಿಸ್ಸಂಕೋಚವಾಗಿ, ಹೇಳುವ ಸ್ವಾತಂತ್ರ್ಯ ಅಭಿವ್ಯಕ್ತಿಯ ನೈತಿಕ ಎದೆಗಾರಿಕೆ, ಬದ್ಧತೆ ಶಿವಶರಣರ ವಚನಗಳಲ್ಲಿ ವ್ಯಕ್ತವಾಗಿದೆ.

ಕೆಳವರ್ಗದಿಂದ ಬಂದ ವಚನಕಾರ್ತಿಯರಿಗೆ ಜಾತಿಯ ಅನಿಷ್ಟ ಬೆಂಬಿಡದೆ ಕಾಡಿರಬಹುದು. ಅದರ ಚಿಂತನೆಯ ಅಭಿವ್ಯಕ್ತಿ ಅಸ್ಪೃಶ್ಯ ನೆಲೆಯಿಂದ ಹುಟ್ಟಿದ ಜಾತಿ ವ್ಯವಸ್ಥೆ ಬ್ರಾಹ್ಮಣ, ಧರ್ಮ ಒಡೆಯವರ್ಗದ ವಿರುದ್ಧ ವ್ರತನಿಷ್ಠೆಯ ಮೂಲಕ ಹೂಡಿದ ಬಂಡಾಯವಾಗಿದೆ ಎನ್ನಲಡ್ಡಿಯಿಲ್ಲ.

"ಕದಿರಕಾಯಕ ವರಮ್ಮವ್ವನಾ ತಿರುಹುವ ರಾಟೆಯ ಕುಲ ಜಾತಿಯ ಹೇಳಿರಣ್ಣಾ" ಎಂದು ಕಾಯಕದಲ್ಲಿ ನಿರತರಾದವರಿಗೆ ಕುಲಜಾತಿಗಳ ಹಂಗಿಲ್ಲ ಎಂದು ಆಕೆ ಕೇಳುವ ಪ್ರಶ್ನೆಗೆ ಬಹುಶಃ ಇಂದೂ ಉತ್ತರ ದೊರೆಯಲಾರದೆನೋ ಕೀಳು ಕುಲದಲ್ಲಿ ಹುಟ್ಟಿ ಬಂದ ಲಿಂಗಮ್ಮ ತನ್ನ ಕುಲದ ಸೂತಕವನ್ನು ಶರಣರ ಸಂಗದಿಂದ ಕಳೆದುಕೊಂಡೆ ಎಂಬ ವಿಶ್ವಾಸ ಹೊಂದಿದ್ದಾಳೆ.

ಅಂದಿನ ಸ್ತ್ರೀಯರು ಪಡೆದ ಸಮನತೆಯಿಂದ, ಧಾರ್ಮಿಕ, ಆಧ್ಯಾತ್ಮಿಕ ಸಾಧನೆಗಳ ಅವಕಾಶಗಳಿಂದ ವ್ಯಕ್ತಿತ್ವ ವಿಕಾಸಗಳಿಸಿ ಕೊಂಡರಲ್ಲದೆ ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದರು. ಸಾಹಿತ್ಯ ರಚನೆ ಕೇವಲ ಪುರುಷರಿಂದಲೇ ಸಾಧ್ಯ ಎಂಬ ಕಲ್ಪಿತ ಧೋರಣೆಯನ್ನು ದೂರ ತಳ್ಳಿದರು. ಅಂತಹ ಅವಕಾಶದಿಂದ ದೂರವೇ ಉಳಿದಿದ್ದ ವಿಚಾರವಂತ ಮಹಿಳೆಯರು ತಮ್ಮ ಅನುಭವಗಳನ್ನು ಅಭಿವ್ಯಕ್ತಪಡಿಸಿದರು.

ಸರಳ ಸುಲಭ ವಚನ ಶೈಲಿಯು ಅವರ ಅಭಿವ್ಯಕ್ತಿಗೆ ಸಮರ್ಥ ಮಾಧ್ಯಮವಾಯಿತು. ಆತ್ಮಕ್ಕೆ ಲಿಂಗಭೇದ ಹೇಗೆ ಇಲ್ಲವೋ ಹಾಗೆಯೇ ಪ್ರತಿಭೆಗೂ ಲಿಂಗಭೇದವಿಲ್ಲ ಎಂಬುದನ್ನು ಅಧಿಕ ಸಂಖ್ಯೆಯ ಶರಣರು ತಮ್ಮ ವಚನ ರಚನೆಯ ಮೂಲಕ ತೋರಿಸಿಕೊಟ್ಟರು. ವಿಶ್ವದ ಇತಿಹಾಸದಲ್ಲಿಯೇ ಏಕಕಾಲಕ್ಕೆ ಹೆಚ್ಚು ಸಂಖ್ಯೆಯಲ್ಲಿ ಶರಣರೊಡನೆ ಸ್ತ್ರೀಯರಿಗೂ ಸಮಾನತೆ ನೀಡಿ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಮಾನತೆ ಪಡೆದುದಲ್ಲದೆ ಸಾಹಿತ್ಯ ರಚನೆಗೈದು ಸಮಾನತೆಯನ್ನು ದಾಖಲಿಸಿದ್ದು ಅಪೂರ್ವವೇ ಸರಿ ಸುಮಾರು ೩೫ಕ್ಕೂ ಹೆಚ್ಚು ಮಂದಿ ವಚನಕಾರ್ತಿಯರು ತಮ್ಮ ವ್ಯಕ್ತಿತ್ವ ವಿಕಾಸದಿಂದ ಪಡೆದ ಅನುಭವ ಆಧ್ಯಾತ್ಮ ವಿಚಾರಗಳನ್ನು ಸರಳವಾಗಿ, ತಾರ್ಕಿಕವಾಗಿ ವ್ಯಕ್ತಗೊಳಿಸಿದರು. ಹೀಗೆ ಅಭಿವ್ಯಕ್ತಿ ಸ್ವಾತಂತ್ರ್ಯವು ಕನ್ನಡ ಸಾಹಿತ್ಯಕ್ಕೆ ಅದರಲ್ಲಿಯೂ ವಚನ ಸಾಹಿತ್ಯಕ್ಕೆ ಮಹಿಳಾ ದೃಷ್ಟಿಕೋನಗಳ ಸ್ಪರ್ಶ ನೀಡಿದ್ದು ಕನ್ನಡ ಸಾಹಿತ್ಯದಲ್ಲಿಯೇ ವಿಶೇಷ ಸಂಗತಿಯಾಗಿದೆ.

ಬಸವಣ್ಣನವರ ಸಮಕಾಲೀನ ಶರಣೆಯರೆಲ್ಲರೂ ತಮಗೆ ದೊರೆತ ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ಹಾಗೂ ಸಮಕಾಲೀನ ವಿಚಾರ ಧೋರಣೆಗಳ ವ್ಯಕ್ತಿರೂಪವಾದ ವಚನಗಳಿಂದ ಪ್ರಭಾವಿತರಾಗಿರುವುದು ಸಹಜವೇ ಸರಿ ತಾವು ರಚಿಸಿದ ವಚನಗಳಲ್ಲಿ ತಮ್ಮ ವಿಚಾರಗಳನ್ನು ಅಧಿಕೃತವಾಗಿ ದಾಖಲು ಪಡಿಸಿದ್ದಾರೆ. ಎಲ್ಲ ಶರಣರಂತೆ ತಮ್ಮ ಅನುಭವಕ್ಕೆ ಬಂದ ವಿಚಾರಗಳು ಅದು ಸಾಮಾಜಿಕವಾಗಿರಲಿ, ಧಾರ್ಮಿಕವಾಗಿರಲಿ, ಆಧ್ಯಾತ್ಮಿಕವಾಗಿರಲಿ, ಅನುಭಾವಿಕ ವಿಚಾರಗಳಾಗಿರಲಿ, ನೇರವಾಗಿ ಸರಳವಾಗಿ, ಕಾವ್ಯಾತ್ಮಕವಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಒಂದು ಅಥವಾ ಎರಡು ವಚನಗಳನ್ನು ಬರೆಯುವುದರಿಂದ ಹಿಡಿದು ಆ ಮಿತಿಯೊಳಗೆ ನೂರು ಮತ್ತು ಅದಕ್ಕೂ ಮೇಲ್ಪಟ್ಟು ವಚನಗಳನ್ನು ರಚಿಸಿದ್ದಾರೆ. ಇದುವರೆಗೆ ಸುಮಾರು

ಸಾವಿರದ ನೂರಕ್ಕೂ ಮೇಲ್ಪಟ್ಟು ಹೆಚ್ಚು ವಚನಗಳು ಲಭ್ಯವಾಗಿವೆ. ಈ ಚಾರಿತ್ರಿಕ ಘಟ್ಟದ ಸಾಂಸ್ಕೃತಿಕ ಪರಿಸರದಲ್ಲಿ ಮಹಿಳೆಯರು ಸಂಖ್ಯಾ ಪ್ರಮಾಣ ಹೆಚ್ಚಾಗಿರುವ ಶಿವಶರಣರಷ್ಟು ಮಹಿಳೆಯರು ಅಷ್ಟೇ ಪ್ರಮಾಣದಲ್ಲಾದರೂ, ಆ ಯುಗದ ವಿಚಾರಗಳಿಗೆ ತಮ್ಮ ಅನುಭವದ ನೆಲೆಯಿಂದ ಕಾಣಿಕೆ ನೀಡಿದ್ದಾರೆಂಬುದನ್ನು ಮರೆಯುವಂತಿಲ್ಲ.

ಅಂದಿನ ಸ್ತ್ರೀಯರು ಪಡೆದ ಸಮಾನತೆಯಿಂದ ಧಾರ್ಮಿಕ, ಆಧ್ಯಾತ್ಮಿಕ ಸಾಧನೆಗಳ ಅವಕಾಶಗಳಿಂದ ತಮ್ಮ ವ್ಯಕ್ತಿತ್ವ ವಿಕಾಸಗೊಳಿಸಿಕೊಂಡರು. ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದರು. ಸಾಹಿತ್ಯ ರಚನೆ ಕೇವಲ ಪುರುಷರಿಂದಲೇ ಸಾಧ್ಯ ಎಂಬ ಕಲ್ಪಿತ ಧೋರಣೆಯನ್ನು ದೂರ ತಳ್ಳಿದರು. ಅಂತಹ ಅವಕಾಶದಿಂದ ದೂರವೇ ಉಳಿದಿದ್ದ ವಿಚಾರವಂತ ಮಹಿಳೆಯರು ತಮ್ಮ ಅನುಭವಗಳನ್ನೇ ಅಭಿವ್ಯಕತಪಡಿಸಿದರು. ಸರಳ ಸುಲಭ ವಚನ ಶೈಲಿಯು ಅವರ ಆಭಿವ್ಯಕ್ತಿಗೆ ಸಮರ್ಥ ಮಾಧ್ಯಮವಾಯಿತು.

ಸಮಾನತೆಯ ಹೊಸ ಬೆಳಕಿನಲ್ಲಿ ಮುಕ್ತ ಅವಕಾಶ ದೊರೆತಾಗ ಸಮಾಜದಲ್ಲಿ ಎಲ್ಲ ಜಾತಿ ವರ್ಗಗಳ ಸ್ತ್ರೀಯರು ಜಾಗೃತರಾದರು, ಅಕ್ಷರಸ್ಥರಾದರು, ಹೊಸ ಬಗೆಯ ಬದುಕಿಗೆ ತೊಡಗಿಸಿಕೊಂಡರು. ಭಕ್ತಿ ಆಧ್ಯಾತ್ಮ ಸಾಧನೆ, ಕಾಯಕ ನಿಷ್ಠೆ ವ್ರತ ಆಚರಣೆಗಳ ವಿಶೇಷ ಅನುಭವ ಪಡೆದರು ಸ್ವತಂತ್ರ್ಯ ಚಿಂತನಾ ಸಾಮರ್ಥ್ಯವನ್ನು ಗಳಿಸಿಕೊಂಡರು ಎಲ್ಲ ವಿಚಾರಗಳಿಗೂ ಸ್ಪಂದಿಸಿದರು. ಸ್ತ್ರೀಯರಿಗೆ ನೀಡಿದ ಸಮನತೆ ಸ್ವಾತಂತ್ರ್ಯಗಳ ಮೂಲಕ ಸಾಧನೆಗೆ ತೊಡಗಿದರು. ಸಿದ್ಧಿಯತ್ತ ಹಲವರು ಪ್ರಯಾಣ ಮಾಡಿದರು. ಹಲವಾರು ಶರಣೆಯರ ವ್ಯಕ್ತಿ ವಿಕಾಸವು ಆತ್ಮ ವಿಶ್ವಾಸ, ಆಧ್ಯಾತ್ಮ ವಿಕಾಸದೊಡನೆ ತಳುಕು ಹಕಿಗೊಂಡಿತು. ಇವರೆಲ್ಲರೂ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಿದರು. ಅದರಾಚೆಗೂ ಮೀರಿ ಆಧ್ಯಾತ್ಮಿಕವಾಗಿಯೂ ಬೆಳೆದರು. ಶರಣೆಯರ ತಾತ್ವಿಕ ಧೋರಣೆಗಳು ಸಾಮಾನ್ಯವಾಗಿ ಕೆಳಕಂಡ ಅಂಶಗಳಲ್ಲಿ ಒಂದಲ್ಲಾ ಒಂದು ಪ್ರಧನವಾಗಿ ಪ್ರಸ್ಥಾಪಿತವಾಗಿದೆ.

೧) ಸ್ತ್ರೀ–ಪುರುಷರೆಂಬ ಭೇದ ನಿರಾಕರಿಸಿದ ದೃಷ್ಟಿ

೨) ಪತಿ–ಪತ್ನಿಯಲ್ಲಿ ಸತಿಪತಿಗಳೊಂದಾದ ಭಕ್ತಿಯ ಮಾದರಿ

೩) ಲೋಕ ಜೀವನದ ಶ್ರೇಷ್ಠತೆಗಾಗಿ ಕಾಯಕ ವ್ರತಾಚರಣೆಯ ನಿಷ್ಠೆಗಳು

ವಿಚಾರವಂತೆಯರಾದ ಶರಣೆಯರೂ ಸಹ ಸ್ತ್ರೀ–ಪುರುಷ ಭೇದದ ರೂಢಿಯ ಮೂಲ ಕಲ್ಪನೆಯನ್ನು ಖಂಡಿಸಿದರು. ಮೋಕ್ಷ ಸಾಧನೆಗಾಗಿ ಈ ಭೇದ ಅಡ್ಡಿ ಎಂಬ ಪ್ರಚಲಿತ ನಂಬಿಕೆಯನ್ನು ಸರಾಸಗಟಾಗಿ ತಿರಸ್ಕರಿಸಿದರು. ಜನಿತಕ್ಕೆ ತಾಯಾಗಿ, ಕೂಟಕ್ಕೆ ಸತಿಯಾಗಿ ಮೋಹಕ್ಕೆ ಮಗಳಾಗಿ ಕಾಣುವ

ಸ್ತ್ರೀಪಾರಮಾರ್ಥಿಕ ಚಿಂತನೆಗೆ ತೊಡಕಲ್ಲ ಎಂಬ ದೋಷಪೂರಿತ ದೃಷ್ಟಿಗೆ ಚಿಕಿತ್ಸೆ ನೀಡಿದ ಶರಣರ ವಿಚಾರಗಳಿಂದ ಸ್ಫೂರ್ತಿಗೊಂಡರು. ಈ ಬಗೆಯ ಸ್ತ್ರೀಪರವಾದ ನಿಷ್ಪಕ್ಷಪಾತೆಯ ಸತ್ಯದರ್ಶನ ಮಾಡಿಸಿ ತನ್ನನ್ನೇ ದರ್ಶನ ಮಾಡಿಸಿ ತನ್ನನ್ನೇ ನಿದರ್ಶನ ಮಾಡಿ ಸ್ತ್ರೀ ಶಕ್ತಿಯ ಸಾಧ್ಯತೆಗಳ ಎತ್ತರ ಬಿತ್ತರಗಳನ್ನು ತೋರಿದ ಶರಣೆ ಅಪ್ರತಿಮ ವಿರಾಗಿಣಿ ಅಕ್ಕಮಹಾದೇವಿ. ಮಾಯೆ ಶರಣರನ್ನು ಸೋಕದು ಎಲ್ಲರೂ ಶರಣಾಗಲಾರರು ಅದಕ್ಕೆಂದೇ ಸಾಮಾನ್ಯರಾದರೂ ಸ್ತ್ರೀಯರನ್ನು ತಾಯಾಗಿ ಗೌರವಿಸುವುದೇ ಶ್ರೇಷ್ಠ ವಿಚಾರ.

ಶರಣರು ನೀಡಿದ ಸಮಾನತೆ, ಸ್ವಾತಂತ್ರ್ಯಗಳನ್ನು ತನ್ನ ವ್ಯಕ್ತಿತ್ವ ವಿಕಾಸಕ್ಕೆ ಉಪಯೋಗಿಸಿಕೊಂಡ ಅಕ್ಕಮಹಾದೇವಿ, ಲೌಕಿಕದ ಜೀವನವನ್ನು ಧಿಕ್ಕರಿಸಿ ಕೌಶಿಕನೊಡನೆ ವಿವಾಹ ಜೀವನವನ್ನು ನಿರಾಕರಿಸಿ ರಾಜ ವೈಭವಗಳನ್ನು ತ್ಯಜಿಸಿ ತನ್ನ ಶಿವಭಕ್ತಿ ಸಾಧನೆಗಾಗಿ, ಏಕಾಂಗಿಯಾಗಿ ಮುನ್ನೆಡೆದಳು, ಪತಿಯನ್ನು ತ್ಯಜಿಸಿದ ಅವಳ ವರ್ತನೆಯು ಬಸವಾದಿ ಶರಣರ ಸಾಂಸ್ಕೃತಿಕ ಧರ್ಮಕ್ಕೆ ವಿರುದ್ಧವೆನಿಸಿದರೂ ಸ್ವತಂತ್ರ್ಯ ಕ್ರಾಂತಿಕಾರಿ ನಿಲುವಾಯಿತು.

ಅಕ್ಕ ಚೆನ್ನಮಲ್ಲಿಕಾರ್ಜುನ ದೇವಂಗೆ 'ಅನು' ಮದು ಮಗಳು ಎಂಬ ಅಲೌಕಿಕ ದಾಂಪತ್ಯದ ಅನುಭಾವಿಕ ನೆಲೆಯಲ್ಲಿ ವಿಹರಿಸಿದ ರಾಜ ಹಂಸದಂತೆ ವಿಶಿಷ್ಟಳಾಗಿ ಮಿಕ್ಕ ಶರಣೆಯರಿಗಿಂತ ವಿಭಿನ್ನ ನೆಲೆಯ ಧೋರಣೆಗಳಿಂದ ಶೋಭಿಸಿದ್ದಾಳೆ ಹೀಗೆ ಸ್ತ್ರೀ ಸ್ವಾತಂತ್ರ್ಯ, ಸಮಾನತೆ ದೊರೆತಾಗ ಮಹಿಳೆಯರು ಸಾಧಿಸಬಹುದಾದ ಔನತ್ಯವೂ ಪುರುಷರಿಗಿಂತ ಒಂದು ಕೈ ಮಿಗಿಲು ಎಂಬುದನ್ನು ವೈರಾಗ್ಯ ಶಿಖರಕ್ಕೇರಿ ನಿಂತ ಅಕ್ಕನ ಜೀವನದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ನೀಡಿದ ಫಲ ಶರಣೆಯರು ಉತ್ತಮೋತ್ತಮ ವಚನರಚನೆ ಗೈಯ್ಯಲು ಪ್ರೇರಣೆ ನೀಡಿತು ಇಲ್ಲಿಯೂ ಸಹ ಅಕ್ಕನ ವಚನಗಳು ಕೇವಲ ೩೫೪ ಮಾತ್ರ ದೊರೆತಿದ್ದು ಒಂದೊಂದು ನುಡಿಮುತ್ತುಗಳಾಗಿ ಅಮೂಲ್ಯ ಮಾಣಿಕ್ಯ ಕಾಶಿಯಂತಿವೆ. ಮಹಾವಿಜ್ಞಾನಿ ಚನ್ನಬಸವಣ್ಣ ಶರಣರ ವಚನಗಳೊಡನೆ ಅಕ್ಕನ ವಚನಗಳನ್ನೇ ತುಲನೆ ಮಾಡಿ ಹೇಳಿರುವ ಮಾತುಗಳು ಈ ಕೆಳಗಿನ ವಚನಗಳ ಮೌಲ್ಯಮಾಪನದ ಉನ್ನತದರ್ಜೆಯನ್ನು ಸೂಚಿಸುತ್ತವೆ.

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ಜೀವನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನ ಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣ ಸಿದ್ಧ
ರಾಮಯ್ಯ"

(ವೀರಶೈವಧರ್ಮ, ಹೆಚ್.ಶಿವ್ಪೇರುದ್ರಸ್ವಾಮಿ)

ಎಂದು ಅಕ್ಕನ ವಚನಗಳಿಗೆ ಅಗ್ರ ಸ್ಥಾನವನ್ನಿತ್ತಿದ್ದಾನೆ. ಹೀಗೆ ವಚನಕಾರರು ನೀಡಿದ ಸಮಾನತೆ ಸೃಷ್ಟಿಸಿದ ಸ್ತ್ರೀಯರಲ್ಲ. ಬೌದ್ಧಿಕ, ಆಧ್ಯಾತ್ಮಿಕ ಔನ್ನತ್ಯದ ಶೃಂಗಕ್ಕೇರುವಂತಹ ಸಾಧನೆ ಮಾಡಿ ತೋರಿದ್ದಾಳೆ. ಮಹಾದೇವಿಯಕ್ಕ ವಚನಕಾರರು ಸ್ತ್ರೀಯರಿಗೆ ನೀಡಿದ ಗೌರವ ಅವಕಾಶಗಳ ಉದಾತ್ತ ನಿಲುವಿನಿಂದ ಶರಣೆಯರಲ್ಲಿ ಹೊಸ ಚಿಂತನಾಶೀಲತೆ ಮೂಡಿತು. ಹೆಣ್ತನದ ಅರಿವನ್ನು ಮೀರಿ ಬೆಳೆಯುವ ಸಾಮರ್ಥ್ಯ ಎಲ್ಲರಿಗೂ ಸಾಧ್ಯವಿಲ್ಲ ಸುಲಭವೂ ಅಲ್ಲ. ಸಾಮಾನ್ಯ ಗೃಹಸ್ಥೆ ಜೀವನದ ಮಹಿಳೆಯರಲ್ಲಿ ಈ ಹೊಸ ಅವಕಾಶಗಳನ್ನು ಎಬ್ಬಿಸಿತು. ಬಸವಣ್ಣನವರ ಪತ್ನಿ ನೀಲಲೋಚನೆ ತನ್ನ ಒಂದು ವಚನದಲ್ಲಿ ಈ ಭಾವನೆಗಳನ್ನು ವ್ಯಕ್ತಪಡಿಸಿದ್ದಾಳೆ.

"ಸಂಸಾರ ಬೇಕೆಂಬರು ಜವಾಬ್ದಾರಿ ಬೇಡವಯ್ಯ
ಹಣ ಬೇಕೆಂಬರು ದುಡಿಮೆ ಬೇಡವಯ್ಯ
ಪದವಿಗಳ ಬೇಕೆಂಬರು ಅಧ್ಯಯನ ಮಾಡರಯ್ಯ
ಸಮಾಜಸೇವೆ ಮಾಡದೆ ಹೆಸರ ಬಯಸುವವರಯ್ಯ
ಎಲ್ಲರೂ ಸುಖವ ಬಯಸುವುದು ಕಂಡು ಬೆರಗಾದರೆನ್ನ"
ಗುರು ಶಿವರಾತ್ರಿ ರಾಜೇಂದ್ರರು"

(ವಚನೋದ್ಭವ- ರಾಜೇಂದ್ರ ಶಿಶು ವಚನ ಸಂಖ್ಯೆ-೮೬, ಪು. ೩೦)

ಈ ಮೇಲಿನ ವಚನವು ಬೇರೆ ವಚನಗಳಿಗಿಂಗ ಭಿನ್ನವೂ, ವಿಶಿಷ್ಟವೂ, ವೈವಿಧ್ಯಮಯವೂ ಆದ ಅರ್ಥವನ್ನು ಒಳಗೊಂಡಿದೆ. ಆ ಮೂಲಕ ಹೆಚ್ಚು ಜನರ ಮನ್ನಣೆಯನ್ನು ಗಳಿಸಿದೆ. ಇಂದಿನ ಯುವಕ-ಯುವತಿಯರ ಮನೋ ವ್ಯಾಪಾರವನ್ನು ಬಹಳ ಮನೋಜ್ಞವಾಗಿ, ಅರ್ಥಪೂರ್ಣವಾಗಿ ತಿಳಿಸಿಕೊಡುತ್ತದೆ. ಇಂದಿನ ಯುವಕ-ಯುವತಿಯರಲ್ಲಿ ಬಹಳಷ್ಟು ಮಂದಿ ಜನರು ಬಹಳ ಸೋಮಾರಿಗಳೂ. ಅಲಸಿಗಳು ಹಾಗೂ ಬದುಕಿನ ಬಗ್ಗೆ ಬೇಜಾವಾಬ್ದಾರಿಯನ್ನು ಹೊಂದಿದವರಾಗಿದ್ದಾರೆ. ನಿರ್ಲಕ್ಷ್ಯದಿಂದ ವರ್ತಿಸುವುದು, ಉದಾಸೀನ ತೋರುವುದು ಇಂದು ತೀರಾ ಸಾಮಾನ್ಯವಾಗಿಬಿಟ್ಟಿದೆ.

ಇಂದಿನ ಯುವ-ಯುವತಿಯರ ಮನಸ್ಸನ್ನು ಗಮನಿಸಿದಾಗ ಮನಸ್ಸಿಗೆ ತುಂಬಾ ಆತಂಕ ಉಂಟಾಗುತ್ತದೆ. ಈ ಅಂಶ ಆಧುನಿಕ ಸಮಾಜಶಾಸ್ತ್ರಜ್ಞರನ್ನು, ವಿಜ್ಞಾನಿಗಳನ್ನು, ಶಿಕ್ಷಣ ತಜ್ಞರನ್ನು ಚಿಂತೆಗೀಡು ಮಾಡಿದೆ. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಹಾಗೂ ಭಾರತದ ಭಾವಿ ನಿರ್ಮಾಪಕರಾಗುವ ಹಿನ್ನೆಲೆಯನ್ನು ಗಮನಿಸಿದಾಗ ನಮ್ಮ ದೇಶದ ಭವಿಷ್ಯ ಎತ್ತಕಡೆ ಸಾಗುತ್ತದೆ ಎಂಬುದನ್ನು ಈಗಲೇ ಅರ್ಥ

ಮಾಡಿಕೊಳ್ಳಬಹುದಾಗಿದೆ. ಆದರೆ ಈ ಸಂಗತಿ ದೇಶದ ಅಭಿವೃದ್ಧಿಯ ದೃಷ್ಟಿಯಿಂದ ತುಂಬಾ ಆತಂಕಕಾರಿ ಬೆಳವಣಿಗೆ ಎಂದು ಹೇಳಬಹುದಾಗಿದೆ.

ಇತ್ತೀಚಿನ ದಿನಗಳಲ್ಲಿ ಆಧುನಿಕ ಯುವಕ ಯುವತಿಯರಲ್ಲಿ ಕಾಯಕ ಪ್ರಜ್ಞೆ ಸೇವಾ ಮನೋಭಾವನೆ ಕ್ಷೀಣಿಸತೊಡಗಿದೆ. ಇದು ತುಂಬಾ ಕಳವಳಕಾರಿಯಾದ ಸಂಗತಿಯಾಗಿದೆ. ಸಂಸಾರ ಬೇಕೆಂದು ಆಸೆ ಪಡುತ್ತಾರೆ ಆದರೆ ಸಂಸಾರದ ಹೊಣೆಗಾರಿಕೆಯನ್ನು ಮಾತ್ರ ಒಪ್ಪಿಕೊಳ್ಳಲು ಸಿದ್ಧರಿಲ್ಲ. ಸಂಸಾರದಿಂದ ಉಂಟಾಗುವ ತೊಂದರೆಗಳು, ಕಷ್ಟಗಳು, ಜಂಜಾಟಗಳು ಮಾತ್ರ ಅವರಿಗೆ ಬೇಕಿಲ್ಲ. ಆದರೆ ಸುಖ ಮಾತ್ರ ಬೇಕು. ಕಷ್ಟ–ನಷ್ಟಗಳು ಅವರಿಗೆ ಬೇಕಿಲ್ಲ. ಅಂದರೆ ಸುಖ ಮಾತ್ರ ಬೇಕು. ಇದೇ ಪ್ರಕೃತಿಯ ನೀತಿಗೆ ವಿರುದ್ಧವಾದುದಾಗಿದೆ.

ಅಲ್ಲದೆ ಕಷ್ಟಪಟ್ಟು ಬೆವರುಸುರಿಸಿ ಹಣಸಂಪಾದನೆ ಮಾಡಬೇಕೆಂಬ ಮನೋಭಾವನೆ ಇಲ್ಲದಂತಾಗಿ ಹೇಗಾದರೂ ಮಾಡಿ ವಾಮ ಮಾರ್ಗಗಳ ಮೂಲಕ ಬಹಳ ಸುಲಭವಾಗಿ ಹಣ ಸಂಪಾದನೆ ಮಾಡಬೇಕೆಂಬ ಉದ್ದೇಶವನ್ನು ಹೊಂದಿದ್ದಾರೆ. ಆದ್ದರಿಂದ ಸುಲಭವಾಗಿ ಹಣ ಸಂಪಾದಿಸುವ ದುಷ್ಟ ಆಲೋಚನೆಗಳ ಕಡೆಗೆ ಯುವ ಜನಾಂಗ ಹೆಚ್ಚು ಹೆಚ್ಚು ಆಕರ್ಷಿತರಾಗಿದ್ದಾರೆ. ದೇಹದಲ್ಲಿ ಅಪಾರಶಕ್ತಿಯಿದ್ದರೂ ಅದನ್ನು ಸದುಪಯೋಗಪಡಿಸಿಕೊಳ್ಳುವ ಬುದ್ಧಿವಂತಿಕೆ, ತಾಳ್ಮೆ ಮತ್ತು ಸಂಯಮಗಳು ಇಲ್ಲದಂತಾಗಿದೆ. ಇದು ನಿಜಕ್ಕೂ ಬಹಳ ವಿಪರ್ಯಾಸದ ಸಂಗತಿಯಾಗಿದೆ. ಶ್ರಮಪಡುವ ಪ್ರಾಮಾಣಿಕ ಮಾರ್ಗ ಅವರಿಗೆ ಖಂಡಿತ ಗೊತ್ತಿಲ್ಲದಂತಾಗಿದೆ.

ಪದವಿಗಳ ಬೇಕೆಂಬರು ಆದರೆ ಕಷ್ಟಪಟ್ಟು ಅಧ್ಯಯನ ಮಾಡುವ ಮನಸ್ಸಿಲ್ಲ ಹೀಗಾಗಿ ವಾಮಮಾರ್ಗಗಳ ಮೂಲಕ, ಪರೀಕ್ಷೆಯ ಅಕ್ರಮ ಚಟುವಟಿಕೆಗಳ ಮೂಲಕ ಪದವಿಗಳನ್ನು ಪಡೆಯುವ ಪ್ರಯತ್ನದಲ್ಲಿ ಇವರು ತೊಡಗಿದ್ದಾರೆ. ಇಂದಿನ ಶಿಕ್ಷಣ ವ್ಯಾಪಾರ ಮನೋಭಾವನೆಯನ್ನು ಹೊಂದಿದ್ದು ಇಂತಹ ಅಕ್ರಮ ಚಟುವಟಿಕೆಗಳಿಗೆ ಪರೋಕ್ಷವಾಗಿ ಸಹಕರಿಸುತ್ತಿದೆ. ಅಲ್ಲದೆ ಪದವಿಗಳನ್ನು ಹಣದಿಂದ ಕೊಂಡುಕೊಳ್ಳುತ್ತಿದ್ದಾರೆ.

ಕಷ್ಟಪಟ್ಟು ಅಧ್ಯಯನ ಮಾಡಿ ಪದವಿಗಳನ್ನು ಸಂಪಾದಿಸದೇ ಸೋಮಾರಿಗಳಾಗಿ ಆಲಸಿಗಳಾಗಿ ತಮ್ಮ ಭವಿಷ್ಯವನ್ನು ತಾವೇ ಕೈಯಾರೆ ಹಾಳು ಮಾಡಿಕೊಳ್ಳುತ್ತಿರುವ ಇಂದಿನ ಯುವಕ ಯುವತಿಯರನ್ನು ಕಂಡು ನಮ್ಮ ಆಧುನಿಕ ವಚನಕಾರ್ತಿಯರು ಆತಂಕ ವ್ಯಕ್ತಪಡಿಸಿದ್ದಾರೆ.

ಸಮಾಜದಲ್ಲಿ ಜನರ ಸೇವೆ ಮಾಡಿ ಹಿಂದುಳಿದವರ, ಶೋಷಿತರ, ದೀನದಲಿತರ ಸೇವೆಮಾಡಿ ಜನಪರ ಕೆಲಸಕಾರ್ಯಗಳನ್ನು ಕೈಗೊಂಡು 'ಜನನಾಯಕ', 'ಬಡವರ ಬಂಧು' ಎಂಬ ಗೌರವವನ್ನು ಪಡೆದುಕೊಳ್ಳಬೇಕಾಗುತ್ತದೆ. ಸಾಮಾನ್ಯ ಜನರ ಕಷ್ಟ-ಸುಖಗಳಿಗೆ ಸ್ಪಂದಿಸುತ್ತಾ ಅವರ ಸಮಸ್ಯೆಗಳನ್ನು ಪರಿಹರಿಸುತ್ತಾ ಅವರ ಬಾಳಿನ ಆಶಾಕಿರಣವಾಗಿ ಅವರ ಕಣ್ಣೀರನ್ನು ಹೊರೆಸಿ ಅವರ ಮನಸ್ಸನ್ನು ಗೆಲ್ಲುವವನೇ ನಿಜವಾದ ಜನನಾಯಕ ಎನಿಸಿಕೊಳ್ಳುತ್ತಾನೆ. ಆದರೆ ಇತ್ತೀಚಿನ ದಿನಗಳಲ್ಲಿ ಯುವಕ-ಯುವತಿಯರು ಜನಸೇವೆ ಮಾಡದೇ ಹೆಸರನ್ನು ಬಯಸುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ.

ಇಂದಿನ ಯುವಕ-ಯುವತಿಯರು ಬರೀ ಸುಖವನ್ನೆ ಬಯಸುತ್ತಿದ್ದಾರೆ ವಿನಃ ಕಷ್ಟವನ್ನಲ್ಲ. ಈ ಪ್ರಪಂಚದಲ್ಲಿರುವ ಎಲ್ಲ ರೀತಿಯ ಸುಖ, ಶಾಂತಿ, ನೆಮ್ಮದಿಗಳು ನಮಗೊಬ್ಬರಿಗೆ ಸಿಗಬೇಕೆಂಬ ದುರಾಸೆಯಲ್ಲಿ ಮುಳುಗಿದ್ದಾರೆ. ಆದರೆ ದುಡಿದು ಬದುಕಬೇಕೆಂಬ ಮನೋಭಾವನೆ ಕೆಲವರಲ್ಲಿ ಇರುವುದಿಲ್ಲ. ಸ್ವತಂತ್ರವಾಗಿ ಸ್ವಾಭಿಮಾನಿಗಳಾಗಿ ಬದುಕಬೇಕೆಂಬ ಮನಸ್ಸು ಅವರಿಗಿಲ್ಲದಂತಾಗಿದೆ. ಮನುಷ್ಯರಾಗಿ ಹುಟ್ಟಿದ ಮೇಲೆ ಪ್ರತಿಯೊಬ್ಬರೂ ಒಂದಲ್ಲಾ ಒಂದು ರೀತಿಯ ಕಾರ್ಯಗಳನ್ನು ನಿರ್ವಹಿಸುವುದು ತೀರಾ ಅನಿವಾರ್ಯವಾಗಿದೆ. ಪರಿಸ್ಥಿತಿ ಹೀಗಿದ್ದರೂ ಇಂತಹ ಯಾವ ಜವಾಬ್ದಾರಿಗಳು, ಹೊಣೆಗಾರಿಕೆಗಳು ಇಂದಿನ ಯುವಕರಿಗೆ ರುಚಿಸುವುದಿಲ್ಲ. ಇಂತಹ ಮನೋಭಾವನೆ ಹೊಂದಿರುವ ವ್ಯಕ್ತಿಗಳನ್ನು ಕಂಡು ಕವಯಿತ್ರಿಯಾದ ರಾಜೇಂದ್ರಶಿಶು ಬೇಸರವನ್ನು ವ್ಯಕ್ತಪಡಿಸಿದ್ದಾರೆ ಹಾಗೂ ವಿರೋಧವನ್ನು ವ್ಯಕ್ತಪಡಿಸಿದ್ದಾರೆ.

ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಕೌಟುಂಬಿಕ ಜವಾಬ್ದಾರಿಯನ್ನು ಹೊಂದಿರಬೇಕು. ವ್ಯಕ್ತಿ ಯಾವಾಗಲೂ ಸಮಾಜಮುಖಿಯಾಗಿ, ಸಮಾಜಕ್ಕೆ ಹತ್ತಿರವಾಗಿ, ಸಮಾಜ ನಿರೀಕ್ಷಿಸಿದ ರೀತಿಯಲ್ಲಿ ನಿರ್ದಿಷ್ಟ ಕರ್ತವ್ಯಗಳನ್ನು ನಿರ್ವಹಿಸುತ್ತಾ ಜವಾಬ್ದಾರಿಗಳನ್ನು ಹೊತ್ತು ಈ ದೇಶದ ಉತ್ತಮ ಪ್ರಜೆಯಾಗಿರಬೇಕು. ಆ ಮೂಲಕ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬುದೇ ಆಧುನಿಕ ವಚನಕಾರ್ತಿಯರ ಅಭಿಲಾಷೆಯಾಗಿದೆ.

"ಹಣವಿದ್ದರೇನು? ದಾಸೋಹ ಮಾಡದಿದ್ದರೆ ವ್ಯರ್ಥ
ಆಯುಷ್ಯವಿದ್ದರೇನು? ಆರೋಗ್ಯವಿಲ್ಲದಿದ್ದರೆ ವ್ಯರ್ಥ
ರೂಪವಿದ್ದರೇನು? ಗುಣವಿಲ್ಲದಿದ್ದರೆ ವ್ಯರ್ಥ
ಎನುತಿಹರು ಶಿವರಾತ್ರಿ ರಾಜೇಂದ್ರರು"

(ವಚನೋದ್ಭವ - ರಾಜೇಂದ್ರಶಿಶು ವಚನಸಂಖ್ಯೆ - ೧೧೫, ಪುಟಸಂಖ್ಯೆ - ೩೭)

ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಅತೀಮುಖ್ಯವಾದ ಅಂಶವೆಂದರೆ ಹಣ, ಆಯುಷ್ಯ, ರೂಪಸೌಂದರ್ಯ ಇತ್ಯಾದಿಗಳು. ಆದರೆ ಇವುಗಳೊಂದಿದ್ದರೆ ಜೀವನದಲ್ಲಿ ಏನನ್ನಾದರೂ ಸಾಧಿಸಬಹುದು ಎಂಬ ಮನೋಭಾವನೆ ಕೆಲವರಲ್ಲಿರುತ್ತದೆ. ಹಣ, ಆಯುಷ್ಯ, ಸೌಂದರ್ಯ ಇವುಗಳು ಮುಖ್ಯವೆಂದು ಭಾವಿಸಬಹುದಾದರೂ ಅವೇ ಸರ್ವಸ್ವವೆಂದು ತಿಳಿಯುವಂತಿಲ್ಲ. ಅಲ್ಲದೆ ಇವುಗಳಿಂದ ನಾವು ಜೀವನದ ಸಾರ್ಥಕತೆಯನ್ನು ಪಡೆಯಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ಶಿವರಾತ್ರಿರಾಜೇಂದ್ರರು ವ್ಯಕ್ತಪಡಿಸಿದ್ದಾರೆ.

ಹಣವೇ ಜೀವನದ ಸರ್ವಸ್ವವಲ್ಲ ಅಲ್ಲದೆ ಗಳಿಸಿದ ಹಣವನ್ನು ಹೇಗೆ? ಏಕೆ? ಎಷ್ಟು, ಯಾವಾಗ ಎಲ್ಲಿ ಖರ್ಚು ಮಾಡಬೇಕು ಎಂಬುದರಲ್ಲಿ ಹಣದ ಸಾರ್ಥಕತೆ ಅಡಗಿದೆ. ಒಬ್ಬವ್ಯಕ್ತಿ ಎಷ್ಟೇ ಸಿರಿವಂತನಾಗಿದ್ದರೂ ಅಪಾರ ಆಸ್ತಿವುಳ್ಳವನಾಗಿದ್ದರೂ ಅವನು ತಾನು ಗಳಿಸಿದ ಹಣದಲ್ಲಿ ಸ್ವಲ್ಪ ಹಣವನ್ನಾದರೂ ಲೋಕ ಕಲ್ಯಾಣ ಕೆಲಸಗಳಿಗೆ ಖರ್ಚು ಮಾಡದಿದ್ದರೆ ಅವಳು ಗಳಿಸಿದ ಹಣ ವ್ಯರ್ಥವೆನಿಸುತ್ತದೆ.

ಆದ್ದರಿಂದ ಜೀವನದಲ್ಲಿ ತಾನು ಗಳಿಸಿದ ಹಣಕ್ಕೆ ಬೆಲೆ, ಮೌಲ್ಯಗಳು ಬರಬೇಕಾದರೆ ಅದು ಹೇಗೆ ಸದುಪಯೋಗಗೊಂಡಿದೆ ಎಂಬುದನ್ನು ಅವಲಂಬಿಸಿದೆ. ಆದ್ದರಿಂದ "ಹಣವಿದ್ದರೇನು ದಾಸೋಹಕ್ಕೆ ಇಲ್ಲದಿದ್ದರೆ" ಎಂಬ ಮಾತು ತುಂಬಾ ಅರ್ಥಪೂರ್ಣವಾಗಿದೆ. ಹಾಗೆಯೇ ಆಯುಷ್ಯ ಇದ್ದರೂ ಆ ವ್ಯಕ್ತಿಗೆ ಒಳ್ಳೆಯ ಆರೋಗ್ಯವಿಲ್ಲದಿದ್ದರೆ ಇರುವ ಆಯುಷ್ಯ ವ್ಯರ್ಥವಾಗುತ್ತದೆ. ಏಕೆಂದರೆ ಪ್ರತೀದಿನವು ಅನಾರೋಗ್ಯದಿಂದ ನರಳಿ ನರಳಿ ಸಾಯುವುದಕ್ಕಿಂತ ನೆಮ್ಮದಿಯಿಂದ ಪ್ರಾಣಬಿಡುವುದೇ ಲೇಸಾಗುತ್ತದೆ. ಆದ್ದರಿಂದ ಜೀವನದಲ್ಲಿ ಆರೋಗ್ಯ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಇಲ್ಲದಿದ್ದರೆ ವ್ಯಕ್ತಿ ಪ್ರತಿನಿತ್ಯವೂ ನರಕ ಯಾತನೆಯನ್ನು ಅನುಭವಿಸಬೇಕಾಗುತ್ತದೆ. ಆರೋಗ್ಯವೇ ಭಾಗ್ಯ ಎಂಬ ತತ್ವವನ್ನು ಈ ವಚನ ಮುಖ್ಯವಾಗಿ ಪ್ರತಿಪಾದಿಸುತ್ತದೆ. ಉತ್ತಮ ಆರೋಗ್ಯವೊಂದಿದ್ದರೆ ಮನುಷ್ಯ ಜೀವನದಲ್ಲಿ ಏನನ್ನಾದರೂ ಸಾಧಿಸಬಲ್ಲ ಶಕ್ತಿಯಿರುತ್ತದೆ. ಆದರೆ ಆರೋಗ್ಯವೊಂದಿಲ್ಲದಿದ್ದರೆ ಅವನು ಏನನ್ನೂ ಸಾಧಿಸಲಾರರು. ಆಗ ಹಣ, ಆಸ್ತಿ, ಸೌಂದರ್ಯ ಎಲ್ಲವೂ ವ್ಯರ್ಥವಾಗುತ್ತದೆ.

ಇಂದಿನ ಯುವಕ–ಯುವತಿಯರು ಆರೋಗ್ಯದ ಬಗ್ಗೆ ಬಹಳ ಉದಾಸೀನ ಭಾವನೆಯನ್ನು ತಳೆದಿದ್ದಾರೆ ಅಲ್ಲದೆ ನಾನಾರೀತಿಯ ದುಶ್ಚಟಗಳಿಗೆ ಬಲಿಯಾಗಿ ಉತ್ತಮ ಆರೋಗ್ಯವನ್ನು ಹಾಗೂ ಅಮೂಲ್ಯ ಜೀವನವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಹೀಗಾಗಿ ಈ ವಚನ ಇಂತಹ ವ್ಯಕ್ತಿಗಳ ಕಡೆಗೆ ಬೆಳಕು ಚೆಲ್ಲುತ್ತದೆ. ಅಲ್ಲದೆ ಅವರಿಗೆ ಮಾರ್ಗದರ್ಶಿಯೂ ಆಗಿದೆ ಎಂದು ಹೇಳಬಹುದು. ಇಂದಿನ

ಆಧುನಿಕ ಸಮಾಜದಲ್ಲಿ ವ್ಯಕ್ತಿ ಹಣದ ದುರಾಸೆಗೆ ಬಲಿಯಾಗಿ ಯಾವಾಗಲೂ ಬರೀ ಹಣ ಸಂಪಾದನೆಯ ಕಡೆಗೆ ಹೆಚ್ಚು ಗಮನ ಹರಿಸುತ್ತಿರುವುದರಿಂದ ಉತ್ತಮ ಆರೋಗ್ಯ ಎಂಬುದು ಅವನಿಗೆ ಕೇವಲ ಮರೀಚಿಕೆಯಾಗಿದೆ ಆದ್ದರಿಂದ ಯುವ ಜನಾಂಗ ಉತ್ತಮವಾದ ಆರೋಗ್ಯವನ್ನು ಹೊಂದಿ, ಆ ಮೂಲಕ ಆರೋಗ್ಯಕರ ಸಮಾಜ ಸ್ಥಾಪನೆಗೆ ಮುಂದಾಗಬೇಕೆಂದು ಕರೆ ನೀಡಿದ್ದಾರೆ.

ವ್ಯಕ್ತಿಯ ರೂಪ, ಸೌಂದರ್ಯಕ್ಕಿಂತ ಅವನಲ್ಲಿರುವ ಸದ್ಗುಣಗಳು ಮುಖ್ಯವಾಗುತ್ತವೆ. ಆದ್ದರಿಂದ ಬಾಹ್ಯ ಸೌಂದರ್ಯಕ್ಕಿಂತ ಆಂತರಿಕ ಸೌಂದರ್ಯ ಉತ್ತಮವಾದುದು. ಒಬ್ಬ ವ್ಯಕ್ತಿ ಮೇಲ್ನೋಟಕ್ಕೆ ಸುಂದರವಾಗಿದ್ದರೆ ಸಾಲದು. ಆಂತರಿಕವಾಗಿಯೂ ಸುಂದರನಾಗಿರಬೇಕಾಗುತ್ತದೆ. ಅಂದಾಗ ಮಾತ್ರ ಅವನು ಉತ್ತಮನೆನಿಸಿಕೊಳ್ಳಲು ಸಾಧ್ಯವಾಗುತ್ತದೆ. ಸುಂದರವಾಗಿದ್ದು ಅವನು ಕೆಟ್ಟ ಗುಣಗಳನ್ನು ಹೊಂದಿದ್ದರೆ ಆ ಸೌಂದರ್ಯವೂ ವ್ಯರ್ಥವಾಗುತ್ತದೆ ಎಂಬುದು ವಚನಕಾರ್ತಿಯರ ಅಭಿಪ್ರಾಯವಾಗಿದೆ. ಅವುಗಳನ್ನು ಸರಿಯಾದ ರೀತಿಯಲ್ಲಿ ಸದ್ವಿನಿಯೋಗ ಪಡಿಸಿಕೊಳ್ಳಬೇಕೆಂಬುದೇ ಇಲ್ಲಿನ ಆಶಯವಾಗಿದೆ. ಆದ್ದರಿಂದ ಹಣವು ದಾಸೋಹಕ್ಕೆ, ಆಯುಷ್ಯಕ್ಕೆ ಉತ್ತಮ ಆರೋಗ್ಯ, ಸೌಂದರ್ಯಕ್ಕೆ ಸದ್ಗುಣಗಳು ತುಂಬಾ ಅಗತ್ಯವೆಂದು ಪ್ರತಿಪಾದಿಸಲಾಗಿದೆ. ಇಲ್ಲದಿದ್ದರೆ ಎಲ್ಲವೂ ವ್ಯರ್ಥ ಎಂಬ ತೀರ್ಮಾನಕ್ಕೆ ಬರಲಾಗಿದೆ.

“ಹೆಣ್ಣು ನರಕದೆಡೆಗೊಯ್ಯುವಾ
ದಾರಿ ದೀಪಗಳೆಂದರಯ್ಯ ಒಬ್ಬ ಕವಿ
ಆಕೆ ಮಹಾಮಾತೆ ರಸ ಸರಸ್ವತಿ
ಕಾವ್ಯಾಧಿದೇವತೆ ಎಂಬುದನ್ನು ಮರೆತನಲ್ಲಾ
ಎನುತಿಹರು ಶಿವರಾತ್ರಿ ರಾಜೇಂದ್ರರು”

(ವಚನೋದ್ಭವ ರಾಜೇಂದ್ರ ಶಿಶು ವಚನಸಂಖ್ಯೆ–೧೦೫, ಪು. ೩೭)

ಪ್ರಾಚೀನಕಾಲದಿಂದಲೂ ಹೆಣ್ಣನ್ನು ನಾನಾರೀತಿಯಾಗಿ ಅಪಕೀರ್ತಿ ಮತ್ತು ಹಾಗೂ ಅಪನಿಂದನೆಗೆ ಗುರಿಮಾಡಿ ಅವಳು ಲೋಕಾಪವಾದಕ್ಕೆ ಒಳಗಾಗುವಂತೆ ಮಾಡಿದ್ದಾರೆ.

ಹೆಣ್ಣನ್ನು ಬಹಳ ಕೀಳುದೃಷ್ಟಿಯಿಂದ ನೋಡಿದ್ದು ಹೆಣ್ಣು ಗಂಡನ್ನು ವಿನಾಶದೆಡೆಗೆ ಕೊಂಡೊಯ್ಯುತ್ತಾಳೆ ಹಾಗೂ ನರಕದೆಡೆಗೆ ಕೊಂಡೊಯ್ಯುತ್ತಾಳೆ ಎಂದೆಲ್ಲಾ ಅವಳನ್ನು ಅವಹೇಳನ ಮಾಡಿದ್ದಾರೆ ಹೆಣ್ಣಿನ ಬಗ್ಗೆ ಕನಿಷ್ಟ ಗೌರವವಾಗಲೀ ಕಿಂಚಿತ್ತು ಕಾಳಜಿಯಾಗಲಿ ಇಲ್ಲ. ಅವಳು ಕೇವಲ ಭೋಗದ ವಸ್ತುವೆಂದು ಭಾವಿಸಿಕೊಂಡಿದ್ದಾರೆ. ಆದರೆ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿಗೆ ನೀಡಿದ

ಸ್ಥಾನಮಾನ, ಗೌರವಗಳು ಮತ್ತಾರಿಗೂ ಲಭಿಸಿಲ್ಲವೆಂದು ಹೇಳಬಹುದು. ಹೆಣ್ಣನ್ನು ಜಗಜ್ಜನನಿ, ಮಹಾತಾಯಿ ಎಂದೆಲ್ಲಾ ಹೊಗಳಿ ನಂತರ ಅವಳನ್ನು ಅಪಮಾನಿಸುವುದು ಸರಿಯಾದ ಕ್ರಮವಲ್ಲ.

ಆಧುನಿಕ ವಚನಗಳು ಸತ್ವದ ದೃಷ್ಟಿಯಿಂದಲೂ ಅರ್ಥ ಹಾಗೂ ಮೌಲ್ಯದ ದೃಷ್ಟಿಯಿಂದಲೂ ಅಪಾರ ಜನಮನ್ನಣೆಯನ್ನು ಮತ್ತು ಅಪಾರ ಕೀರ್ತಿಯನ್ನು ಪಡೆದುಕೊಂಡಿವೆ. ಈ ಹಿನ್ನಲೆಯಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡು ಎಲ್ಲರ ಪ್ರೀತಿ ಮತ್ತು ವಿಶ್ವಾಸಗಳನ್ನು ಗಳಿಸಿಕೊಂಡಿವೆ. ಆಧುನಿಕ ವಚನಕಾರ್ತಿಯರು ಮಹಿಳೆಯರ, ಮಕ್ಕಳ, ಹಿಂದುಳಿದವರ, ದೀನದಲಿತರ, ಬಡವರ ಕಷ್ಟ ಕೋಲೆಗಳನ್ನು ಹಾಗೂ ಅವರ ನೋವಿನ ಆಳ-ಅಗಲಗಳನ್ನು ಎಳೆ-ಎಳೆಯಾಗಿ ಬಿಡಿಸಿ ಸಮಾಜದ ಮುಂದೆ ಮಂಡಿಸಿದ್ದಾರೆ. ಅಲ್ಲದೆ ದೇವರ, ಧರ್ಮದ ಹೆಸರಿನಲ್ಲಿ ಅಮಾಯಕ ಹೆಣ್ಣು ಮಕ್ಕಳನ್ನು ಹೇಗೆ ತಮ್ಮ ಸ್ವಾರ್ಥಕ್ಕಾಗಿ ಮೂಲಭೂತವಾದಿಗಳು ಬಲಿಪಶುಗಳನ್ನಾಗಿ ಮಾಡುತ್ತಾರೆ. ಅಲ್ಲದೆ ಸಾಮಾನ್ಯ ಮಹಿಳೆಯರು ಹೇಗೆ ಶ್ರೀಮಂತರ, ರಾಜಕಾರಣಿಗಳ ಸ್ವಾರ್ಥಕ್ಕೆ ಬಲಿಯಾಗುತ್ತಾರೆ ಎಂಬುದನ್ನು ಬಹಳ ಮನೋಜ್ಞವಾಗಿ ತಮ್ಮ ವಚನಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ.

ಆಧುನಿಕ ವಚನಕಾರ್ತಿಯರು ಸಮಾಜದ ಜನರಲ್ಲಿ ಕಂಡುಬರುವ, ದೋಷಗಳನ್ನು, ತಪ್ಪುಗಳನ್ನು, ನ್ಯೂನ್ಯತೆಗಳನ್ನು ಗುರುತಿಸಿ ಆ ಮೂಲಕ ಪ್ರಜ್ಞಾವಂತರ ಗಮನ ಸೆಳೆದಿದ್ದಾರೆ. ಆ ಮೂಲಕ ಸಮಾಜದ ಹೊಸ-ಚಿಂತನೆ ಹಾಗೂ ಆಲೋಚನೆಗಳಿಗೆ ಇಂಬು ನೀಡಿದ್ದಾರೆ. ಅಲ್ಲದೆ ಶಾಂತಿ ಮತ್ತು ಸುಖೀ ರಾಜ್ಯದ ಸ್ಥಾಪನೆಯ ಹಂಬಲವನ್ನು ಹೊಂದಿದ್ದಾರೆ. ಸಮಾಜದ ಕೊಳೆಯನ್ನು ತೊಳೆಯುವ ಪ್ರಯತ್ನವನ್ನು ಮಾಡಿದ್ದಾರೆ.

ಆಧುನಿಕ ವಚನಕಾರ್ತಿಯರನ್ನು ಸಮಾಜದ ವೈದ್ಯರೆಂದು ಕರೆಯಬಹುದು. ಏಕೆಂದರೆ ಆಧುನಿಕ ಸಮಾಜದಲ್ಲಿ ಆಳವಾಗಿ ಬೇರೂರಿರುವಂತಹ ಅನೇಕ ಗೊಡ್ಡು ಸಂಪ್ರದಾಯಗಳು, ಸಾಮಾಜಿಕ ಅಂಧಶ್ರದ್ಧೆಗಳ ವಿರುದ್ಧ ತಮ್ಮ ಧ್ವನಿಯನ್ನು ಎತ್ತಿದ್ದಾರೆ. ಸಮಾಜದಲ್ಲಿ ಕಾಣುತ್ತಿರುವ ತಾರತಮ್ಯ ಮನೋಭಾವನೆ ಕೀಳರಿಮೆ ಸ್ತ್ರೀ-ಪುರುಷ ಅಸಮಾನತೆ ಮುಂತಾದ ಅನಿಷ್ಟಗಳ ಬಗ್ಗೆ ಬೆಳಕು ಚಲ್ಲಿದ್ದಾರೆ.

ಬಾಲ್ಯವಿವಾಹ, ವರದಕ್ಷಿಣೆ, ಅತ್ಯಾಚಾರ, ಬಲಾತ್ಕಾರ ಮುಂತಾದ ಕೆಟ್ಟ ಪದ್ಧತಿಗಳ ವಿರುದ್ಧ ಮಹಿಳೆಯರಲ್ಲಿ ಮತ್ತು ಸಮಾಜದಲ್ಲಿ ಪ್ರತಿಭಟಿಸುವ ಮನೋಭಾವನೆಯನ್ನು ಬೆಳೆಸಿದ್ದಾರೆ. ಹೋರಾಟದ ಮೂಲಕ ಜನರಲ್ಲಿ ಜಾಗೃತಿಯನ್ನುಂಟು ಮಾಡುತ್ತಿದ್ದಾರೆ. ಸ್ತ್ರೀಪರವಾದ ಕಾಳಜಿಯನ್ನು ಹೊಂದಿ ಅವರ

ಸಮಸ್ಯೆಗಳಿಗೆ ಸ್ಪಂದಿಸುತ್ತ ನೊಂದ ಮಹಿಳೆಯರಿಗೆ ಆಶಾಕಿರಣವಾಗಿದ್ದಾರೆ ಮಹಿಳೆಯಲ್ಲಿರುವ ಕೀಳರಿಮೆ, ಅಸಹಾಯಕ ಮನೋಭಾವನೆಗಳ ಬಗ್ಗೆ ಗಮನವನ್ನು ನೀಡಿದ್ದಾರೆ.

ಆಧುನಿಕ ಸಮಾಜದಲ್ಲಿ ಮಾನವೀಯ ಮೌಲ್ಯಗಳು ಕುಸಿಯುತ್ತಿರುವುದರಿಂದ ಮಾನವ ಸಂಬಂಧಗಳಿಗೆ ಬೆಲೆಯಿಲ್ಲದಂತಾಗಿದೆ. ಅಲ್ಲದೆ ಮಾನವೀಯ ಮೌಲ್ಯಗಳು ಕೇಳುವವರೇ ಇಲ್ಲದಂತಾಗಿದೆ. ಅಂದರೆ ತಂದೆ–ತಾಯಿ, ಅಣ್ಣ–ತಮ್ಮ, ಅಕ್ಕ–ತಂಗಿಯರು, ಬಂಧು–ಬಾಂಧವರು, ಸ್ನೇಹಿತರು, ಅತ್ತೆ, ಮಾವಂದಿರು ಮುಂತಾದ ರಕ್ತ ಸಂಬಂಧಗಳಿಗೆ ಬೆಲೆಯೇ ಇಲ್ಲದಂತಾಗಿದೆ. ಇವರ ಸಮಾಜದಲ್ಲಿ ಕಡೆಗಣಿಸಲಾಗಿದೆ, ನಿರ್ಲಕ್ಷಿಸಲಾಗಿದೆ ಎಂದರೆ ತಪ್ಪಾಗಲಾರದು. ಮನುಷ್ಯ ವಿಜ್ಞಾನ ಮತ್ತು ತಂತ್ರಜ್ಞಾನದ ಭರಾಟೆಯಲ್ಲಿ ತೊಡಗಿ ರಕ್ತ ಸಂಬಂಧಿಗಳನ್ನು ಕಡೆಗಣಿಸಿದ್ದಾನೆ. ಕೇವಲ ಹಣ ಸಂಪಾದನೆಯೇ ಅವನ ಮುಖ್ಯ ಗುರಿಯಾಗಿದ್ದರಿಂದ ಆ ಕಡೆಗೆ ಹೆಚ್ಚು ಗಮನಹರಿಸಿದ್ದಾನೆ. ಹೆತ್ತ ತಂದೆ–ತಾಯಿಗಳು ಇವರಿಂದ ದೂರವಾಗಿದ್ದಾರೆ. ಸಾಕಿ ಬೆಳೆಸಿದಂತಹತಂದೆ–ತಾಯಿಗಳಿಗೆ ಅನ್ನ ಹಾಕದೆ ಅವರನ್ನು ಅನಾಥರನ್ನಾಗಿ ಮಾಡಿದ್ದಾರೆ. ಇಂತಹ ಅಸಹಾಯಕ ತಂದೆ–ತಾಯಿಗಳ–ಗುರುಹಿರಿಯರ ಗೋಳನ್ನು ಕೇಳುವವರೇ ಇಲ್ಲದಂತಾಗಿದೆ. ಇದು ನಿಜಕ್ಕೂ ದುರಂತದ ಸಂಗತಿಯಾಗಿದೆ. ಇದು ನಿಜಕ್ಕೂ ತಲೆತಗ್ಗಿಸುವ ಅಂಶವಾಗಿದೆ. ಇಂತಹ ಸ್ವಾರ್ಥ ಮಕ್ಕಳ ಮನೋಭಾವನೆಯನ್ನು ಆಧುನಿಕ ವಚನಕಾರ್ತಿಯರು ಖಂಡಿಸಿದ್ದಾರೆ.

ಅತ್ತೆ ಸೊಸೆಯರ ಸಂಬಂಧಗಳು, ಅಣ್ಣ–ತಂಗಿಯರ ಸಂಬಂಧಗಳು ಸಹ ಸಡಿಲಗೊಳ್ಳುತ್ತಿರುವುದು ತುಂಬ ಕಳವಳಕಾರಿಯಾದ ಸಂಗತಿಯಾಗಿದೆ. ಅತ್ತೆ–ಸೊಸೆಯರ ಜಗಳಗಳು, ಅಕ್ಕ–ತಂಗಿಯರ ಹೋರಾಟಗಳು, ಅಣ್ಣ–ತಮ್ಮಂದಿರರ ಯುದ್ಧಗಳು ತೀರಾ ಸಾಮಾನ್ಯವಾಗಿವೆ. ಏಕೆಂದರೆ ಮಾನವೀಯ ಸಂಬಂಧಗಳು ಕುಸಿಯುತ್ತಿರುವುದೇ ಇಷ್ಟೆಲ್ಲಾ ಅನಾಹುತಗಳಿಗೆ ಕಾರಣವಾಗಿದೆ. ಪ್ರಾಚೀನ ಕಾಲದಲ್ಲಿದ್ದ ಅವಿಭಕ್ತ ಕುಟುಂಬಗಳಲ್ಲಿ ಕಂಡುಬರುವ ನೈತಿಕತೆ, ಹೊಂದಾಣಿಕೆ, ಅನ್ಯೋನ್ಯತೆ, ತ್ಯಾಗ, ಪ್ರೀತಿ, ಪ್ರೇಮ, ಸಹೋದರತೆ ಹಾಗೂ ಸಹಕಾರಗಳು ಇಂದು ಕಣ್ಮರೆಯಾಗಿದೆ. ಇದು ಎಲ್ಲರನ್ನು ಚಿಂತೆಗೀಡು ಮಾಡಿದೆ. ಆದ್ದರಿಂದ ಸಮಾಜದಲ್ಲಿ ಹಾಗೂ ಮನುಷ್ಯ–ಮನುಷ್ಯರಲ್ಲಿ ಮತ್ತೆ ದಯೆ, ಪ್ರೀತಿ, ಕರುಣೆ, ಸಹೋದರತೆಗಳು, ಸಾಮರಸ್ಯಗಳು ಮೂಡಿ ಬರಲಿ ಎಂಬುದು ಆಧುನಿಕ ವಚನಕಾರ್ತಿಯರ ಆಶಯವಾಗಿದೆ.

## ೪) ಶಿಕ್ಷಣ

"ಅಧ್ಯಯನ ಅಧ್ಯಾಪನಗಳು
ಶಿಕ್ಷಕರ ಎರಡು ಕಣ್ಣುಗಳಯ್ಯ
ಪಾಠ ಮಾಡದೆ ಖೊಟ್ಟಿ ಸಂಬಳ ಪಡೆದ
ಖೊಟ್ಟಿ ಮಾನವ ಮಕ್ಕಳ ದ್ರೋಹಿ ಎನಿಸನೆ?
ಶಿಕ್ಷಣ ದ್ರೋಹಕೆ ಮಿಗಿಲಾದುದೇನಿವುದಯ್ಯ
ಇಂಥವರ ಸಂಖ್ಯೆ ಶೂನ್ಯವಾಗಲಿ ಎಂದು ಹರಸು
ಪ್ರಣವಶ್ರೀ ಪರಂಜ್ಯೋತಿ ನಿನ್ನ
ಬೆರೆಯದ ಶೂನ್ಯವನು ಹೊರತುಪಡಿಸಿ"

(ವಚನಜ್ಯೋತಿ ವಚನಸಂಖ್ಯೆ:೧೧೦, ಪು. ೬೬)

ಈ ವಚನವು ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ವಚನವಾಗಿದೆ, ಅದರಲ್ಲೂ ವಿಶೇಷವಾಗಿ ಶಿಕ್ಷಕರಿಗೆ ಸಂಬಂಧಿಸಿದೆ. ಇತ್ತೀಚಿನ ದಿನಗಳಲ್ಲಿ ಎಲ್ಲಾ ಕಡೆಗಳಿಂದ ಒಂದು ಕೂಗು ಕೇಳಿಬರುತ್ತಿದೆ. ಅದೇಂದರೆ ಶಿಕ್ಷಣದಲ್ಲಿ ಶಿಕ್ಷಣದ ಗುಣಮಟ್ಟ ಕುಸಿಯುತ್ತಿದೆ ಎಂಬ ಕೂಗು. ಇಂತಹ ಸಂದರ್ಭದಲ್ಲಿ ಈ ವಚನಕ್ಕೆ ಹೆಚ್ಚು ಪ್ರಾಮುಖ್ಯತೆ ಬಂದಿದೆ. ಶಾಲಾಶಿಕ್ಷಣ ಅದರಲ್ಲೂ ಪ್ರಾಥಮಿಕ ಶಿಕ್ಷಣ ಬಹಳ ದುಬಾರಿಯಾಗಿದೆ. ಶಿಕ್ಷಣ ವ್ಯಾಪಾರೀಕರಣಗೊಳ್ಳುತ್ತಿದೆ. ಆದ್ದರಿಂದ ಶಿಕ್ಷಣ ಕ್ಷೇತ್ರದಲ್ಲಿ ಗುಣಮಟ್ಟ ಕುಸಿಯಲು ಕಾರಣವಾಗಿದೆ.

ಇತರ ಜೊತೆಗೆ ಶಾಲೆಗಳಲ್ಲಿ ಕೆಲವು ಶಿಕ್ಷಕರು ಸಮರ್ಪಕವಾಗಿ ಕರ್ತವ್ಯ ನಿರ್ವಹಿಸದೇ ಇರುವುದೂ ಸಹ ಒಂದು ಪ್ರಮುಖ ಕಾರಣವಾಗಿದೆ. ಆದ್ದರಿಂದ ಇಂತಹ ಆರೋಪಗಳಿಂದ ಮುಕ್ತವಾಗಬೇಕಾದರೆ ಶಿಕ್ಷಕರು ಮೊದಲು ಅಧ್ಯಯನ ಶೀಲರಾಗಬೇಕು. ಸದಾ ಅಧ್ಯಯನದಲ್ಲಿ ತೊಡಗಿರಬೇಕು. ಆದ್ದರಿಂದ ಅಧ್ಯಯನ ಮತ್ತು ಅಧ್ಯಾಪನಗಳು ಶಿಕ್ಷಕರ ಎರಡು ಕಣ್ಣುಗಳು ಪಾಠ ಮಾಡದೆ ಉಚಿತವಾಗಿ ಸಂಬಳ ಪಡೆಯುವ ಶಿಕ್ಷಕರು ಮಕ್ಕಳಿಗೆ ದ್ರೋಹ ಮಾಡಿದಂತಾಗುತ್ತದೆ. ಆದ್ದರಿಂದ ಶಿಕ್ಷಕರು ಸದಾ ಅಧ್ಯಯನ ಶೀಲರಾಗಿ ಶಾಲಾಕಾಲೇಜುಗಳಲ್ಲಿ ತಮ್ಮ ವೃತ್ತಿ ಶ್ರೇಷ್ಠವಾದುದು ಮತ್ತು ಪವಿತ್ರವಾದುದು ಎಂದು ತಿಳಿದು ಪ್ರಾಮಾಣಿಕವಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸುವುದರ ಮೂಲಕ ಕುಸಿಯುತ್ತಿರುವ ಶಿಕ್ಷಣದ ಗುಣಮಟ್ಟವನ್ನು ತಡೆಗಟ್ಟಬೇಕೆಂಬ ಅಪೇಕ್ಷೆಯನ್ನು ಆಧುನಿಕ ವಚನಕಾರ್ತಿಯರು ವ್ಯಕ್ತಪಡಿಸಿದ್ದಾರೆ. ಏಕೆಂದರೆ ವಿದ್ಯಾದಾನಕ್ಕಿಂತ ಶ್ರೇಷ್ಠವಾದ ದಾನ ಮತ್ತೊಂದಿಲ್ಲ. ಆದ್ದರಿಂದ ವಿದ್ಯಾದಾನವನ್ನು ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆಯಿಂದ ನಿರ್ವಹಿಸಬೇಕು. ಆ ಮೂಲಕ ಪ್ರಜ್ಞಾವಂತರು,

ಸುಶಿಕ್ಷಿತ ಸಮಾಜದ ಸ್ಥಾಪನೆಗೆ ಮುಂದಾಗಬೇಕೆಂದು ತಿಳಿಸಿದ್ದಾರೆ. ಎಲ್ಲ ದ್ರೋಹಗಳಿಗಿಂತ ಶಿಕ್ಷಣದ್ರೋಹ ತುಂಬಾ ಘೋರವಾದ ಸಂಗತಿಯಾಗಿದೆ.

ಆದ್ದರಿಂದ ಶಾಲಾ ಕಾಲೇಜುಗಳಲ್ಲಿ ಶಿಕ್ಷಕ ಬಾಂಧವರು ಯಾವಾಗಲೂ ಅಧ್ಯಯನಶೀಲರಾಗಿ, ಕ್ರಿಯಾಶೀಲರಾಗಿ ಆಧುನಿಕ ಶಿಕ್ಷಣ ಪದ್ಧತಿಗೆ ಅನುಗುಣವಾಗಿ ಗುಣಮಟ್ಟದ ಶಿಕ್ಷಣ ನೀಡಿ ಭಾರತದ ಭಾವಿ ನಿರ್ಮಾಪಕರನ್ನು ಭಾವಿ ಪ್ರಜೆಗಳನ್ನು ನಿರ್ಮಿಸಬೇಕು. ಏಕೆಂದರೆ ಇಂದಿನ ಮಕ್ಕಳೇ ಮುಂದಿನ ಪ್ರಜೆಗಳಾಗಿದ್ದರಿಂದ ಮಕ್ಕಳಿಗೆ ಒಳ್ಳೆಯ ಗುಣಾತ್ಮಕ ಶಿಕ್ಷಣ ನೀಡುವುದರ ಮೂಲಕ ದೇಶದ ಅಭಿವೃದ್ಧಿಗೆ ಸಹಕರಿಸಬೇಕೆಂದು ತಿಳಿಸಿದ್ದಾರೆ.

ನಮ್ಮ ದೇಶದ ಭವಿಷ್ಯ ತರಗತಿಯ ನಾಲ್ಕು ಗೋಡೆಗಳ ಮಧ್ಯೆ ಅಡಗಿದೆ ಅಲ್ಲದೆ, ದೇಶದ ಅಭಿವೃದ್ಧಿ ಮತ್ತು ಪ್ರಗತಿ ಮುಖ್ಯವಾಗಿ ವಿದ್ಯಾವಂತ ಪ್ರಜೆಗಳನ್ನು ಅವಲಂಬಿಸಿರುವುದರಿಂದ ಉತ್ತಮ ಸತ್ಪ್ರಜೆಗಳನ್ನು ರೂಪಿಸುವ ಹೊಣೆಗಾರಿಕೆ ಶಿಕ್ಷಕರ ಮೇಲಿದೆ. ಆದ್ದರಿಂದ ಶಿಕ್ಷಕರು ಕಡಿಮೆ ಸಂಬಳ ಪಡೆಯುತ್ತಿದ್ದರೂ ತಮ್ಮ ವೃತ್ತಿ ಶ್ರೇಷ್ಠವಾದುದು, ಪವಿತ್ರವಾದುದೆಂದು ಭಾವಿಸಿ ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕೆಂಬ ಕಾಳಜಿಯನ್ನು ಹೊಂದಿದ್ದಾರೆ. ಅಲ್ಲದೆ ಇನ್ನು ಮುಂದೆಯಾದರೂ ಕೆಲವು ಶಿಕ್ಷಕರು ತಮ್ಮ ಜವಾಬ್ದಾರಿಯನ್ನು ಅರ್ಥಮಾಡಿಕೊಂಡು ಮೌಲ್ಯಾಧಾರಿತ ಶಿಕ್ಷಣ ನೀಡಲಿ, ಪಾಠ ಮಾಡದೇ ಕೇವಲ ಸಂಬಳವನ್ನು ಮಾತ್ರ ತೆಗೆದುಕೊಳ್ಳುವ ಶಿಕ್ಷಕರ ಸಂಖ್ಯೆ ಶೂನ್ಯವಾಗಲಿ ಎಂದು ಹಾರೈಸಿದ್ದಾರೆ.

> "ಶ್ರೇಷ್ಠ ಶಿಕ್ಷಕರು ಮಕ್ಕಳನ್ನು ಪ್ರೇರೇಪಿಸುತ್ತಾರೆ
> ಉತ್ತಮ ಶಿಕ್ಷಕರು ಕಲಿಸುತ್ತಾರೆ
> ಸಾಮಾನ್ಯ ಶಿಕ್ಷಕರು ಕೇವಲ ಬೋದಿಸುತ್ತಾರೆ
> ಅದಮ ಶಿಕ್ಷಕರು ಕೇವಲ ದೂಷಿಸುತ್ತಾರೆ"

ಆದ್ದರಿಂದ ಶ್ರೇಷ್ಠ ಶಿಕ್ಷಕರಾಗಬಯಸುವವರಿಗೆ ಸತತ ಅಧ್ಯಯನ ಹಾಗೂ ಸತತ ಪರಿಶ್ರಮಗಳು ಅಗತ್ಯ. ಏಕೆಂದರೆ ಜ್ಞಾನದ ಎಲ್ಲಾ ಮಜಲುಗಳನ್ನು ಜ್ಞಾನದ ವಿವಿಧ ರೂಪುರೇಷೆಗಳನ್ನು ತಿಳಿದುಕೊಳ್ಳಬೇಕಾದರೆ ಶಿಕ್ಷಕರಾದವರು ಹಲವು ರೀತಿಯಲ್ಲಿ ಜ್ಞಾನವನ್ನು ಹಲವು ಕಡೆಗಳಿಂದ ಸಂಗ್ರಹಿಸಬೇಕಾಗುತ್ತದೆ. ಶಿಕ್ಷಕರು ಅಧ್ಯಯನ ಶೀಲರಾಗದಿದ್ದರೆ ಅವರ ಬೋಧನಾಗುಣಮಟ್ಟವು ಎಂದಿಗೂ ಉತ್ತಮಗೊಳ್ಳಲಾರದು ಆದ್ದರಿಂದ ಶಿಕ್ಷಕರಾದವರು ಯಾವಾಗಲೂ ಗ್ರಂಥಾಲಯಗಳಲ್ಲಿ, ಪ್ರಯೋಗಾಲಯಗಳಲ್ಲಿ ಇನ್ನಿತರ ಶಿಕ್ಷಣ ತರಬೇತಿ

ಸಂಸ್ಥೆಗಳಲ್ಲಿ ಅಧ್ಯಯನ ಮಾಡಿ ತಮ್ಮ ಜ್ಞಾನ ದಿಗಂತದ ಪರಿಧಿಯನ್ನು ಹಂತ ಹಂತವಾಗಿ ವಿಸ್ತರಿಸಿಕೊಳ್ಳಬೇಕಾಗುತ್ತದೆ.

ಸಾಹಿತ್ಯ, ಕಲೆ, ವಿಜ್ಞಾನ, ಸಂಸ್ಕೃತಿ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಶ್ರೇಷ್ಠ ಗ್ರಂಥಗಳನ್ನು ಅಧ್ಯಯನ ಮಾಡಿ ಜ್ಞಾನ ಮತ್ತು ಅನುಭವಗಳನ್ನು ಹೆಚ್ಚಿಸಿಕೊಳ್ಳಬೇಕು. ಇಂದಿನ ಆಧುನಿಕ ಕಂಪ್ಯೂಟರ್ ಯುಗದಲ್ಲಿ ಕಲೆ, ಸಾಹಿತ್ಯ, ವಿಜ್ಞಾನ ಕ್ಷೇತ್ರಗಳಲ್ಲಿ ಅಪಾರವಾದಂತಹ ಆವಿಷ್ಕಾರಗಳು, ಸಂಶೋಧನೆಗಳು ಹಾಗೂ ಅಧ್ಯಯನಗಳು ಭರದಿಂದ ಸಾಗುತ್ತಿರುವ ಈ ಸಂದರ್ಭದಲ್ಲಿ ಶಿಕ್ಷಕರು ಪುಸ್ತಕದ ಹುಳುಗಳಾಗಿರಬೇಕು, ಸಂಪನ್ಮೂಲ ವ್ಯಕ್ತಿಗಳಾಗಿರಬೇಕು. ಶಿಕ್ಷಕರು ಜ್ಞಾನದ ನಿಧಿಯಾಗಿ ವಿದ್ಯಾರ್ಥಿಗಳಿಗೆ ಆಶಾಕಿರಣವಾಗಿರಬೇಕು. ಮಾರ್ಗದರ್ಶಿಯಾಗಿರಬೇಕು. ಆದ್ದರಿಂದ ಪ್ರತಿಯೊಬ್ಬ ಶಿಕ್ಷಕರು ವಿದ್ಯಾರ್ಥಿಗಳ ಜೀವನದಲ್ಲಿ ಭವಿಷ್ಯದಲ್ಲಿ ಉದಾಸೀನ ತೋರದೆ ಕ್ರಿಯಾಶೀಲರಾಗಿ ಅವರ ಉದ್ಧಾರಕ್ಕಾಗಿ ತಮ್ಮ ಬದುಕನ್ನು ಮೀಸಲಾಗಿಡಬೇಕಾಗುತ್ತದೆ. ಇಲ್ಲದಿದ್ದರೆ ಮಕ್ಕಳು ಭವಿಷ್ಯವನ್ನು ರೂಪಿಸುವ ಶಿಕ್ಷಕರೇ ತಮ್ಮ ವಿದ್ಯಾರ್ಥಿಗಳಿಗೆ ಪರಮಶತ್ರುಗಳಾಗುತ್ತಾರೆ. ಅಲ್ಲದೇ ಶಿಕ್ಷಕರೇ ಸ್ವತಃ ತಮ್ಮ ಕೈಯಾರೆ ವಿದ್ಯಾರ್ಥಿಗಳ ಉತ್ತಮ ಭವಿಷ್ಯವನ್ನು ಹಾಳು ಮಾಡಿದಂತಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಶಿಕ್ಷಕರು ತಮ್ಮ ಕರ್ತವ್ಯ ಹಾಗೂ ಜವಾಬ್ದಾರಿಗಳನ್ನು ಅರ್ಥಮಾಡಿಕೊಂಡು ಶ್ರದ್ಧೆಯಿಂದ, ನಿಷ್ಠೆಯಿಂದ ಪ್ರಾಮಾಣಿಕವಾಗಿ ಸೇವೆಸಲ್ಲಿಸಿದ್ದೇ ಆದಲ್ಲಿ ನಮ್ಮ ದೇಶ ಪ್ರಗತಿಹೊಂದುವುದರಲ್ಲಿ ಯಾವುದೇ ಸಂಶಯವಿಲ್ಲ.

ಸರ್ಕಾರ ಶಿಕ್ಷಣ ಕ್ಷೇತ್ರಕ್ಕಾಗಿ ಸಾಕಷ್ಟು ಹಣವನ್ನು ಖರ್ಚು ಮಾಡುತ್ತಿದ್ದರೂ ಸಹ ನಾವು ಶಿಕ್ಷಣ ಕ್ಷೇತ್ರದಲ್ಲಿ ನಿರೀಕ್ಷಿತ ರೀತಿಯಲ್ಲಿ ಪ್ರಗತಿಯನ್ನು ಸಾಧಿಸುವುದಕ್ಕೆ ಸಾಧ್ಯವಾಗಿಲ್ಲ. ಬೇರೆ ರಾಜ್ಯಗಳಿಗೆ ಹೋಲಿಸಿದರೆ ನಮ್ಮ ರಾಜ್ಯ ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದಿದೆ. ಆದ್ದರಿಂದ ಶಿಕ್ಷಣ ಇಲಾಖೆಯ ಅಧಿಕಾರಿಗಳು ಈ ಕಡೆಗೆ ಗಮನಹರಿಸಬೇಕಾಗಿದೆ. ಶಿಕ್ಷಕರೂ ಸಹ ಉತ್ತಮರೀತಿಯಲ್ಲಿ ಕಾರ್ಯ ನಿರ್ವಹಿಸುವ ಅಗತ್ಯವಿದೆ. ಇಲ್ಲದಿದ್ದರೆ ನಮ್ಮ ವಿದ್ಯಾರ್ಥಿಗಳ ಭವಿಷ್ಯ ಮಂಕಾಗುತ್ತದೆ. ಆದ್ದರಿಂದ ಪ್ರಜೆಗಳನ್ನು ರೂಪಿಸಿ ಉತ್ತಮವಾದ, ಆರೋಗ್ಯಕರವಾದ ಸಮಾಜದ ಸ್ಥಾಪನೆಗೆ ಶಿಕ್ಷಕರ ಕೈಜೋಡಿಸಲಿ ಎಂಬುದೇ ಆಧುನಿಕ ವಚನಕಾರ್ತಿಯರ ಅಭಿಪ್ರಾಯ.

"ಇಪ್ಪತ್ತೈದು ವರುಷ ಸಾಕಿ ವಿದ್ಯೆ ಕಲಿಸಿ
ಗಣ್ಯ ವ್ಯಕ್ತಿಗಳನ್ನಾಗಿಸಿಹರಯ್ಯಾ ತಂದೆತಾಯಿ

ಇಪ್ಪತ್ತೈದು ನಿಮಿಷದಲ್ಲಿ ಅವರ ತಿದ್ದುವಳಯ್ಯ
ಪಕ್ಕಕ್ಕೆ ಬಂದವಳು ಕೊಡಹಾಲಾದರೂ ತೊಟ್ಟು ಹುಳಿಸಾಕು"

(ರಾಜೇಂದ್ರ ಶಿಶೂ, ವಚನಸಂಖ್ಯೆ-೧೦, ವಚನೋದ್ಭವ, ಪು. ೦೪)

'ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ' ಎಂಬ ಗಾದೆಯಂತೆ ಸುಮಾರು ಇಪ್ಪತ್ತೈದು ವರ್ಷ ತಂದೆ-ತಾಯಿಗಳು ಸಾಕಿಬೆಳೆಸಿರುತ್ತಾರೆ. ಅಲ್ಲದೆ ತಮ್ಮೆಲ್ಲ ಆಸೆ-ಆಕಾಂಕ್ಷೆ, ಸುಖ-ಸಂತೋಷಗಳನ್ನು ಬದಿಗಿಟ್ಟು ಸರ್ವಸ್ವವನ್ನೂ ತ್ಯಾಗಮಾಡಿ ತಮ್ಮ ಮಗನನ್ನು ಒಬ್ಬ ಗಣ್ಯ ವ್ಯಕ್ತಿಯನ್ನಾಗಿ ಮಾಡಿರುತ್ತಾರೆ. ಆದರೆ ಅಂತಹ ಮಗನನ್ನು ಕೇವಲ ಇಪ್ಪತ್ತೈದು ನಿಮಿಷಗಳಲ್ಲಿ ಅವನನ್ನು ಮದುವೆಯಾದ ಹೆಂಡತಿ ಗಂಡನ ಮನಸ್ಸನ್ನು ಪರಿವರ್ತಿಸಿಬಿಡುತ್ತಾಳೆ. ಇದು ತುಂಬಾ ವಿಪರ್ಯಾಸದ ಸಂಗತಿಯಾಗಿದೆ. ಇಲ್ಲಿ ತಾಯಿ-ತಂದೆಯವರ ತ್ಯಾಗವನ್ನು ಒಂದು ಕೊಡ ಹಾಲಿಗೂ ಮತ್ತು ಹೊಸದಾಗಿ ಮದುವೆಯಾಗಿ ಬಂದ ಮಗನ ಹೆಂಡತಿಯನ್ನು ಒಂದು ತೊಟ್ಟು ಹುಳಿಗೂ ಹೋಲಿಸಿರುವುದು ತುಂಬಾ ಅರ್ಥಪೂರ್ಣವಾಗಿದೆ. ಅಂದರೆ ಇಪ್ಪತ್ತೈದು ವರ್ಷಗಳ ತಂದೆ-ತಾಯಿಗಳ ಸಾಧನೆಯನ್ನು ಇಪ್ಪತ್ತೈದು ನಿಮಿಷಗಳಲ್ಲಿ ಅಳಸಿ ಹಾಕಿ ತನ್ನ ವಶಕ್ಕೆ ತೆಗೆದುಕೊಂಡುಬಿಡುತ್ತಾಳೆ. ಆದ್ದರಿಂದ ಇದು ತುಂಬಾ ಕಳವಳಕಾರಿಯಾದ ಸಂಗತಿಯಾಗಿದೆ. ಹೆಂಡತಿಯ ಮಾತನ್ನು ಕೇಳಿ ಹೆತ್ತ ತಂದೆ-ತಾಯಿಗಳನ್ನು ದೂರ ಮಾಡುವ ಇಂದಿನ ದುಷ್ಟ ಯುವಕರಿಗೆ ಈ ವಚನ ಜೀವಂತ ಸಾಕ್ಷಿಯಾಗಿದೆ.



"ಪರೀಕ್ಷೆ ಬಂದಾಗ ಕಲ್ಲು ಕಲ್ಲಿಗೂ
ನಮಿಸುವನಯ್ಯ ವಿದ್ಯಾರ್ಥಿ ಓದದೆ
ಫಲ ಬಯಸುವನಯ್ಯಾ, ಶಾಲೆಯೇ ದೇವಾಲಯ
ಓದೇ ಮಂತ್ರಪಠಣ, ಪುಸ್ತಕಗಳೇ ದೇವರು
ವಿದ್ಯಾರ್ಥಿಯೇ ಅರ್ಚಕ ಆದಾಗ ಫಲ ತಾನೇ ಸಿಗುವುದು"
ಎನುತಿಹರು ಶಿವರಾತ್ರಿ ರಾಜೇಂದ್ರ.

(ವಚನೋದ್ಭವ ರಾಜೇಂದ್ರ ಶಿಶು, ವಚನಸಂಖ್ಯೆ: ೫೬, ಪು. ೧೯)

ಇದು ಇಂದಿನ ವಿದ್ಯಾವಂತ ಯುವ-ಯುವತಿಯ ಮನೋಭಾವನೆಯನ್ನು ಬಹಳ ಸಮರ್ಥವಾಗಿ, ಅರ್ಥಪೂರ್ಣವಾಗಿ ವಿಡಂಬಿಸುತ್ತದೆ. ಹಿಂದಿನ ವಿದ್ಯಾರ್ಥಿಗಳು ಜ್ಞಾನಾರ್ಜನೆಗಾಗಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಆದರೆ ಈಗಿನ ವಿದ್ಯಾರ್ಥಿಗಳು ಹೇಗಾದರೂ ಮಾಡಿ ಪರೀಕ್ಷೆ ಪಾಸಾಗಬೇಕೆಂಬ

ಮನೋಭಾವನೆಯನ್ನು ಹೊಂದಿದ್ದಾರೆ. ಕಷ್ಟಪಟ್ಟು ಓದದೆ ಸಮಯವನ್ನು ವ್ಯರ್ಥವಾಗಿ ಕಳೆದು ಪ್ರತಿಫಲ ಬಯಸುವ ವಿದ್ಯಾರ್ಥಿಗಳನ್ನು ವಚನಕಾರ್ತಿಯರು ಖಂಡಿಸಿದ್ದಾರೆ.

### ೩) ಸಾಹಿತ್ಯ ಮತ್ತು ರಾಜಕಾರಣ

"ಅಧಿಕಾರಕ್ಕೆ ಹದ್ದಿನಂತೆ ಕಾದಿಹರಯ್ಯ
ಕುರ್ಚಿಯ ಹಿಡಿಯಲು ಮರ್ಜಿಮಾಡುವರಯ್ಯ
ಹಣವನೆ ತಿನ್ನುವ ನಾಗರೀಕ ಹುಲಿಗಳಾಗಿಹರಯ್ಯ
ಸರ್ವಾಧಿಕಾರಿಯಾಗಿ ಚಾಡಿಮಾತನು ಕೇಳಿ
ಸರ್ವರನ್ನು ತನ್ನ ಬಲೆಯಲ್ಲಿ ಕಟ್ಟುವರಯ್ಯ
ಪ್ರಣವಶ್ರೀ ಪರಂಜೋತಿ ನೀನೊಲಿಯದ ಕಣ್ಣುಗಾಣರು"

(ಪ್ರಣವ ಜ್ಯೋತಿ ಡಾ. ಕೆ.ಎಸ್.ರತ್ನಮ್ಮ ಆಧುನಿಕ ವಚನಗಳು, ಪು. ೧೧೦)

ಈ ಮೇಲಿನ ವಚನ ಇಂದಿನ ಕೆಟ್ಟ ರಾಜಕೀಯ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಹಾಗೂ ಇಂದಿನ ರಾಜಕೀಯ ಪರಿಸ್ಥಿತಿ ಹಾಗೂ ಸ್ಥಿತಿಗತಿ ಎಷ್ಟು ಅಧೋಗತಿಗೆ ಇಳಿದಿದೆ ಎಂಬುದನ್ನು ಈ ವಚನ ಮನೋಜ್ಞವಾಗಿ ತಿಳಿಸಿಕೊಡುತ್ತದೆ. ಇಂದಿನ ರಾಜಕೀಯ ಸನ್ನಿವೇಶವನ್ನು ರಾಜಕಾರಣಗಳ ಕುತಂತ್ರವನ್ನು ಎಳೆ-ಎಳೆಯಾಗಿ ಮನದಟ್ಟುಮಾಡಿಕೊಡುತ್ತದೆ.

ಇಂದಿನ ರಾಜಕಾರಣಿಗಳು ತಮ್ಮ ತತ್ವ, ಸಿದ್ಧಾಂತ, ಆದರ್ಶಗಳನ್ನು ಗಾಳಿಗೆ ತೂರಿ, ತಮ್ಮ ಸ್ವಾರ್ಥಕ್ಕಾಗಿ ಹಣದ ದುರಾಸೆಯಿಂದ ಮಾಡಬಾರದ ಹೇಯ ಕಾರ್ಯವನ್ನು ಮಾಡಿ ರಾಜಕಾರಣದ ಪವಿತ್ರತೆಯನ್ನೇ ಹಾಳುಮಾಡಿದ್ದಾರೆ. ಅಧಿಕಾರಕ್ಕಾಗಿ ಎಂತಹ ಹೇಯ ಕಾರ್ಯಕ್ಕಾದರೂ ಹಿಂಜರಿಯದೆ ರಣಹದ್ದುಗಳಂತೆ ಕಾಯುತ್ತಿದ್ದಾರೆ. ಅಲ್ಲದೆ ತಮ್ಮ ಕುರ್ಚಿಯನ್ನು ರಕ್ಷಿಸಿಕೊಳ್ಳಲು ನಾನಾರೀತಿಯ, ಮೋಸ, ವಂಚನೆ ಕಪಟ ದ್ರೋಹಗಳನ್ನು ಎಸಗಿ ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡುತ್ತಿದ್ದಾರೆ. ಇಂಥವರನ್ನು ಈ ವಚನ ಖಂಡಿಸುತ್ತದೆ. ಅಂತಹ ದುಷ್ಟ ರಾಜಕಾರಣಿಗಳನ್ನು ತೀವ್ರವಾಗಿ ವಿರೋಧಿಸುತ್ತದೆ.

ಇಂದಿನ ರಾಜಕಾರಣಿಗಳು ಜನಸಾಮಾನ್ಯರ ಬಡವರ ಅಸಹಾಯಕರ ಹಣವನ್ನು ತಿಂದು ನಾಗರೀಕ ಸಮಾಜದ ಹುಲಿಗಳಾಗಿದ್ದಾರೆ. ಹಣದ, ಅಧಿಕಾರದ ಮದದಿಂದ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದಾರೆ. ಹೀಗೆ ಬಡವರ ರಕ್ತವನ್ನು ಹೀರುವ ಕ್ರೂರ ರಾಜಕಾರಣಿಗಳಿಗೆ ಸರಿಯಾದ ಬುದ್ಧಿಯನ್ನು ಕಲಿಸಿ ಅವರಲ್ಲಿ ಒಳ್ಳೆಯ ಜನಸೇವೆ ಮಾಡುವ ಉತ್ತಮ ಆಲೋಚನೆಗಳು ಉಂಟಾಗುವಂತೆ ಮಾಡಿ

ಅಂತಹ ಕೆಟ್ಟ ರಾಜಕಾರಣಿಗಳನ್ನು ಸರಿದಾರಿಗೆ ತರುವಂತೆ ನಮ್ಮ ವಚನಗಾರ್ತಿಯರಾದ ಡಾ. ರತ್ನಮ್ಮನವರು ಪರಂಜ್ಯೋತಿ ಪ್ರಣವ  ಶಿವ ಪರಮಾತ್ಮನಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

ಇಂದಿನ ಆಧುನಿಕ ಯುಗದಲ್ಲಂತೂ ಕನ್ನಡ ವಚನ ಸಾಹಿತ್ಯ, ಕನ್ನಡ ಸಾಹಿತ್ಯದ ಒಂದು ಸಮರ್ಥ, ಶ್ರೇಷ್ಠ ಕಾವ್ಯಪ್ರಕಾರವಾಗಿ ಪರಿಣಮಿಸಿದೆ.  ಆದ್ಯರ ವಚನಸಾಹಿತ್ಯದ ಸ್ಫೂರ್ತಿಯನ್ನು ಕುಡಿದೇ ಇಂದೂ ಕೂಡ ವರ್ತಮಾನದ ವಚನ ಸಾಹಿತ್ಯ ಬೆಳೆಯುತ್ತಿದೆಯಾದರೂ ಅದರಂತೆ ಸಮಷ್ಠಿ ಪ್ರಧಾನವಾದ ಸಾಹಿತ್ಯವಾಗದೇ ಕೇವಲ ವ್ಯಷ್ಟಿಪ್ರಧಾನವಾದ ಸಾಹಿತ್ಯವಾಗಿ ಅದೇಕೋ ಏನೋ ಅದು ವ್ಯಕ್ತಿಗತ ನೆಲೆಯಲ್ಲಿಯೇ ನಿಲ್ಲುತ್ತದೆ.

ಆಧುನಿಕ ವಚನಕಾರ್ತಿ ಡಾ. ರತ್ನಮ್ಮ ಕೆ.ಎಸ್. ಅವರ ಜ್ಯೋತಿಯಲ್ಲಿನ ವಚನಗಳು ಇಂದಿನ ಸಂದರ್ಭ ಪ್ರಜ್ಞೆಯಿಂದ ದೀಪ್ತವಾದ ಚಿಂತನಾಶೀಲ ಸಾತ್ವಿಕ ಚೇತನವೊಂದು ತನ್ನ ಸುತ್ತಮುತ್ತಲಿನ ಹತ್ತು ದಿಕ್ಕಿನ ಸಮಾಜಕ್ಕೆ ಸ್ಪಂದಿಸಿದ ಸಂವೇದನೆಗಳ ಹಿಂದೆ, ಸ್ಥಾಯಿಯಾಗಿರುವ ಅಂಶವೆಂದರೆ ಅವರ ಆಧ್ಯಾತ್ಮ ಅಭೀಪ್ಸೆ ತೀವ್ರತರವಾದ ಸಾಮಾಜಿಕ ಕಳಕಳಿ ಹಾಗೂ ಇಲ್ಲಿ ಕಂಡುಬರುವ ತಾಯಿ ರತ್ನಮ್ಮನವರ, ಲೋಕಾನುಭವದ ಸೂಕ್ಷ್ಮ ತಂತುರಗಳ ನಿರಂತರ ಸ್ಪರ್ಶದಿಂದ ಜೀವಪ್ರಭೆ ಲಭಿಸಿದೆ.  ಹಾಗಾಗಿ ಕೆಲವಂತೂ ವಚನಗಳ ರೂಪದಲ್ಲಿ ಮುಕ್ತಾಯವಾಗದೇ ಪರಂಪರೆಯ ಸತ್ವವನ್ನು ಅರಗಿಸಿಕೊಂಡು ಹಿಂದಿನ ಪರಿಸರದ ಹಿನ್ನೆಲೆಯಲ್ಲಿ ಅದನ್ನು ಅಭಿವ್ಯಕ್ತಗೊಳಿಸುವಲ್ಲಿ ಸಾಫಲ್ಯತೆಯನ್ನು ಪಡೆದಿವೆ.

ಇಲ್ಲಿಯ ಅನೇಕ ವಚನಗಳಲ್ಲಿ ಹಲವೆಡೆ ಆಧ್ಯಾತ್ಮಿಕ, ದೃಷ್ಟಿಯ ಜೊತೆಗೆ ವೈಚಾರಿಕ ಪ್ರಜ್ಞೆಯೂ ಓತಪ್ರೋತವಾಗಿ ಹರಿದಾಡಿದೆ.  ಅವರ ಜೀವನದಲ್ಲಿ ಅನೇಕ ಅವಗಢಗಳು ಅಕ್ಷರ ರೂಪಪಡೆದು ಕೆಲವು ಅನನ್ಯ ವಚನಗಳಿಗೂ ಕಾರಣವಾಗಿವೆ.  ಅನೇಕ ಲೌಕಿಕದ ವಲಯಗಳಲ್ಲಿ ಸಹಾನುಭೂತಿಯಿಂದ ತೊಡಗಿಸಿಕೊಂಡ ಲೋಕಾನುಭವ ಸಹಜ ಸಂಪನ್ನವಾದುದು ಅಂತಹ ಸ್ವಾಅನುಭವದ ಶ್ರೀಮಂತಿಕೆಯ ಹಲವು ಮುಖಗಳನ್ನು ಅವರ ಸಾಮಾಜಿಕ ಕಳಕಳಿಯ ಪ್ರಜ್ಞೆಯನ್ನು ಈ ಸಂಕಲನದ ವಚನಗಳಲ್ಲಿ ಮುಖ್ಯವಾಗಿ ಕಾಣಬಹುದಾಗಿದೆ.

ಯುಗಯುಗಾಂತರಗಳಿಂದ ಸ್ತ್ರೀಯರಿಗೆ ಅನ್ಯಾಯ ಮಾಡಿದ ಪರಂಪರೆ ನಮ್ಮದು. ಅಮಾನವೀಯತೆಯ ತುತ್ತತುದಿಯಾದ ಹೆಣ್ಣು ಭ್ರೂಣಹತ್ಯೆ, ಶಿಶುಹತ್ಯೆಗಳಂತೂ ಇಂದಿಗೂ ನಡೆಯುತ್ತಿವೆ. ತೀರಾ ಇತ್ತೀಚೆಗೆ ಗಂಡು ಮಗುವಿಗಾಗಿ ಮಂತ್ರವಾದಿಯ ಮಾತನ್ನು ಕೇಳಿ ತನ್ನ ಪ್ರಾಯದ ಮಗಳನ್ನು

ದುಷ್ಟಶಕ್ತಿಗೆ ಬಲಿಕೊಟ್ಟ ಮಾನವನ ಬಗೆಗೆ ತಿಳಿದು ನಾವೆಲ್ಲಾ ಹೌಹಾರಿದರೂ ಕಾಲಕ್ರಮೇಣ ಏನೂ ಆಗಿಲ್ಲವೆಂಬಂತೆ, ಅದೂ ಸಹಜವೆಂಬಂತೆ ಸುಮ್ಮನೆ ಸಾಗುತ್ತಿದ್ದೇವೆ.

ರಾಕ್ಷಸರೂ ನಾಚುವಂತಹ ಚಿಕ್ಕಪುಟ್ಟ ಬಾಲಕಿಯರ ಮೇಲಿನ ಅತ್ಯಾಚಾರಗಳಂತೂ ದಿನಕ್ಕೊಂದು ವರದಿಯಾಗಿ ಪುರುಷ ಮೃಗವಾಗುವುದಕ್ಕೆ ಪುರಾವೆ ಒದಗಿಸುತ್ತಿವೆ. ನಿಜವಾಗಿಯೂ ಇವೆಲ್ಲಾ ಪುರುಷನ ಅಧಃಪತನಕ್ಕೆ ಅಲ್ಲಗಳೆಯಲಾಗದ ಸಾಕ್ಷಿಗಳಾಗಿವೆ. ಇಂತಹ ಸಂಗತಿಯನ್ನು ಕಂಡು ಕೇಳಿದ ವಚನಕಾರ್ತಿಯ ಸೂಕ್ಷ್ಮ ಸಂಸ್ಕಾರದ ಮನಸ್ಸು ವಿಲವಿಲ ಒದ್ದಾಡುತ್ತಾ ಇಂತಹ ರಾಕ್ಷಸ ಕೃತ್ಯಗಳನ್ನು ತಕ್ಷಣ ನಿಲ್ಲಿಸುವಂತೆ ಒತ್ತಾಯಿಸಿದ್ದಾರೆ. ಅಲ್ಲದೆ ಪ್ರತಿನಿತ್ಯ ಇಂತಹ ದುಷ್ಕೃತ್ಯಗಳನ್ನು ನೋಡಿ, ನೋಡಿ ಮನಸ್ಸು ರೋಸಿ ಹೋಗಿದ್ದರೂ ಅವರ ಮನಸ್ಸು ಮಾತ್ರ ಆಶಾವಾದವನ್ನು ತೊರೆದಿಲ್ಲ. ಅಂಥವರಿಗೆಲ್ಲ ಸರಿದಾರಿ ತೋರುವ ಆಶಯದ ಆದರ್ಶಪರ ಪ್ರಯತ್ನಮುಂದುವರಿದಿದೆ. ಅದಕ್ಕವರು ತಮ್ಮದೇ ಆದ ಧರ್ಮದೃಷ್ಟಿ ತೋರಿದ್ದಾರೆ.

"ಕಟುಕರಂತೆ ಕೊಲ್ಲುವರೆಂದು
ಗೊನೆಬಿಟ್ಟ ಬಾಳೆ ಕೊರಗುವುದೇ
ಸ್ವಜನಪೀಡೆಗಳಿಗೆ ಈಡಾಗಿ ಕೇಡನೆಣಿಸದೆ
ಬಾಳೆಯಂತೆ ಬೀಗುವ
ನಿರ್ಮೋಹತ್ವವ ನಿರ್ವಚಿಸು"

(ವಚನಜ್ಯೋತಿ, ಕೆ.ಎಸ್.ರತ್ನಮ್ಮ, ಪುಟ ಸಂಖ್ಯೆ ೧೨೨)

ಎಂದು ಸ್ತ್ರೀಕುಲಪರವಾಗಿ ಭಾವಪರವಶರಾಗಿ ಭಗವಂತನಲ್ಲಿ ಮೊರೆಯಿಟ್ಟಿದ್ದಾರೆ. ಈ ವಚನ ಎಂಥವರ ಮನಸ್ಸನ್ನಾದರೂ ಕರಗಿಸಿಬಿಡುತ್ತದೆ. ಅಂತಹ ಶಕ್ತಿ ಈ ವಚನದಲ್ಲಿದೆ ಎಂದು ಹೇಳಬಹುದು.

"ಕಾವಿ, ಖಾದಿ, ಖಾಕಿ ಕಾರಿಗಳು
ಸಮಾಜ ಆಳುತಿಹರಯ್ಯ
ಸಮಾಜದ ರಕ್ಷಕರಾಗಬೇಕಾದವರು
ಸಮಾಜದ ಭಕ್ಷಕರಾಗಿಹರಯ್ಯ"

ವಚನಜ್ಯೋತಿ, ಕೆ.ಎಸ್.ರತ್ನಮ್ಮ, ಪುಟಸಂಖ್ಯೆ – ೧೨೩

ಈ ಮೇಲಿನ ವಚನ ಈ ಸಮಾಜದ ಪ್ರಸ್ತುತ ಸನ್ನಿವೇಶವನ್ನು ಹೆಚ್ಚು ಸಮರ್ಥವಾಗಿ ಮತ್ತು ಪರಿಣಾಮಕಾರಿಯಾಗಿ ಪ್ರಸ್ತುತಪಡಿಸುತ್ತದೆ. ಆಧುನಿಕ ಸಮಾಜವು ತ್ರಿಮೂರ್ತಿಗಳ ದರ್ಬಾರಿನಿಂದ ನಲುಗಿಹೋಗಿದೆ. ಕಾವಿಗಳೆಂದರೆ ಧಾರ್ಮಿಕ ಸಂಘಸಂಸ್ಥೆಗಳ್ಲಿ ಮೆರೆಯುತ್ತಿರುವ ಮಠಾಧಿಪತಿಗಳು

ಮಠಾಧೀಶರು ಇಂದು ನಮ್ಮ ಸಮಾಜವನ್ನು ನಿಯಂತ್ರಿಸುತ್ತಿದ್ದಾರೆ. ಆದರೆ ಒಂದು ದುರಂತ ಸಂಗತಿಯೆಂದರೆ ದೇವರು, ಧರ್ಮ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿಯೂ ರಾಜಕೀಯ ತಾಂಡವಾಡುತ್ತಿದೆ. ಧಾರ್ಮಿಕ ಕ್ಷೇತ್ರಕ್ಕೆ ರಾಜಕೀಯ ಪ್ರವೇಶ ಪಡೆದಿರುವುದು ತುಂಬಾ ಕಳವಳಕಾರಿಯಾದ ಸಂಗತಿಯಾಗಿದೆ. ದೇವರ ಧರ್ಮದ ಹೆಸರಿನಲ್ಲಿ ಸಮಾಜಸೇವೆ ಮಾಡಬೇಕಾದ ಧಾರ್ಮಿಕ ಪುರುಷರೇ ರಾಜಕೀಯ ಚಿಂತನೆಮಾಡುವುದು ಖಂಡಿತ ಒಳ್ಳೆಯ ಬೆಳವಣಿಗೆಯಲ್ಲ.

ಇಂದಿನ ಸಮಾಜವನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ತನ್ನ ಕಪಿಮುಷ್ಠಿಯಲ್ಲಿ ಇಟ್ಟುಕೊಂಡಿರುವ ವ್ಯಕ್ತಿಗಳೆಂದರೆ ರಾಜಕಾರಣಿಗಳು. ಇಂದು ಸಮಾಜದಲ್ಲಿ ನಡೆಯುತ್ತಿರುವ ಎಲ್ಲಾ ದುಷ್ಕೃತ್ಯಗಳಿಗೆ ಕೆಲವು ರಾಜಕೀಯ ವ್ಯಕ್ತಿಗಳ ಕೈವಾಡವಿರುತ್ತದೆ. ಇಂದಿನ ಎಲ್ಲ ದುರಂತಗಳಿಗೂ ಇಂದಿನ ರಾಜಕೀಯ ವ್ಯವಸ್ಥೆಯೇ ಕಾರಣವಾಗಿದೆ. ರಾಜಕಾರಣಿಗಳು ಚುನಾವಣೆಯ ಸಂದರ್ಭದಲ್ಲಿ ಮಾತ್ರ ಜನರಿಗೆ ಆಸೆ-ಆಮಿಷಗಳನ್ನು ತೋರಿಸಿ ನಂತರ ಜನರನ್ನು ನಡುನೀರಲ್ಲಿ ಕೈಬಿಡುತ್ತಾರೆ. ದೇವರ, ಧರ್ಮದ ಹೆಸರಿನಲ್ಲಿ ಪ್ರಮಾಣವಚನ ಸ್ವೀಕರಿಸುವ ಇಂದಿನ ರಾಜಕಾರಣಿಗಳು. ಜನರ ಕಷ್ಟಸುಖಗಳಲ್ಲಿ ಭಾಗಿಯಾಗಿ ಅವರ ತೊಂದರೆಗಳನ್ನು, ಸಮಸ್ಯೆಗಳನ್ನು ಪರಿಹರಿಸುವ ಜವಾಬ್ದಾರಿಯನ್ನು ಹೊತ್ತ ರಾಜಕಾರಣಿಗಳೇ ಇಂದು ಸಾಮಾನ್ಯ ಮುಗ್ಧ ಜನರನ್ನು ಬಲಿತೆಗೆದುಕೊಂಡಿದ್ದಾರೆ. ಇಂತಹ ಕೆಟ್ಟ ರಾಜಕೀಯ ಪರಿಸ್ಥಿತಿ ಬದಲಾಗುವವರೆಗೂ ನಮ್ಮ ದೇಶದ ಅಭಿವೃದ್ಧಿ ಸಾಧ್ಯವಿಲ್ಲ. ಆದ್ದರಿಂದ ನಮ್ಮ ಸಮಾಜದ ಅಭಿವೃದ್ಧಿ ಹಾಗೂ ದೇಶದ ಅಭಿವೃದ್ಧಿಗಳೆರಡೂ ತ್ರಿಮೂರ್ತಿಗಳ ಕಪಿಮುಷ್ಟಿಯಲ್ಲಿ ಬಂಧಿತವಾಗಿದೆ. ಇನ್ನು ಮೂರನೆಯದಾಗಿ ಖಾಕಿಗಳು ನಮ್ಮ ಸಮಾಜವನ್ನು ಆಳುತ್ತಿದ್ದಾರೆ. ಈ ಖಾಕಿಗಳು ರಾಜಕಾರಣಿಗಳ ಕೈಗೊಂಬೆಯಾಗಿ, ರಾಜಕಾರಣಿಗಳ ಒತ್ತಾಸೆಯಾಗಿ ಸಮಾಜದಲ್ಲಿ ಕರ್ತವ್ಯನಿರ್ವಹಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಪೋಲಿಸಿನವರು ಹಿಂದಿದ್ದ ತಮ್ಮ ಗೌರವ ಮತ್ತು ಪ್ರತಿಷ್ಠೆಗಳನ್ನು ಕಾಪಾಡಿಕೊಂಡು ಬರುವಲ್ಲಿ ಸಂಪೂರ್ಣವಾಗಿ ವಿಫಲರಾಗಿದ್ದಾರೆ. ಇವರೂ ಸಹ ಹಣದ ದುರಾಸೆಯಿಂದ ಅನ್ಯಾಯ, ಅಕ್ರಮ, ಅತ್ಯಾಚಾರ, ದಬ್ಬಾಳಿಕೆ, ದೌರ್ಜನ್ಯಗಳನ್ನು ನಡೆಸಿ ಸಮಾಜದ ಶಾಂತಿಯನ್ನು, ನೆಮ್ಮದಿಯನ್ನು ಕದಡುತ್ತಿದ್ದಾರೆ. ಯಾರು ಬಡಜನರಿಗೆ ರಕ್ಷಣೆಗಳನ್ನು ಕೊಡಬೇಕಾಗಿತ್ತೋ ಅವರೇ ಜನರ ಭಕ್ಷಕರಾಗಿದ್ದಾರೆ. ಯಾರು ಸಮಾಜದಲ್ಲಿ ಶಾಂತಿ, ಮತ್ತು ಸುವ್ಯವಸ್ಥೆಗಳನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿದ್ದಾರೆಯೋ ಅವರೇ ಪರೋಕ್ಷವಾಗಿ ಶಾಂತಿಯನ್ನು ಕದಡುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಒಳ್ಳೆಯವರ ಪ್ರಮಾಣ ಕಡಿಮೆ ಇರುವುದನ್ನು ಗಮನಿಸಬಹುದು.

ಒಟ್ಟಾರೆ ಕಾವಿ, ಖಾದಿ, ಖಾಕಿ ಈ ತ್ರಿಮೂರ್ತಿಗಳು ಈ ಸಮಾಜವನ್ನು ಆಳುತ್ತಿದ್ದಾರೆ. ಈ ಮೂವರು ಸಮಾಜವನ್ನು ರಕ್ಷಿಸುವ ಗುರುತರ ಜವಾಬ್ದಾರಿಯನ್ನು ಹೊಂದಿದವರಾಗಿದ್ದಾರೆ. ಆದರೆ ಈ ತ್ರಿಮೂರ್ತಿಗಳು ಹೆಣ್ಣು, ಹೊನ್ನು, ಮಣ್ಣಿಗಾಗಿ, ಸತ್ಯ, ನ್ಯಾಯ, ಧರ್ಮಗಳನ್ನು ಗಾಳಿಗೆ ತೂರಿ ಸಮಾಜದ ಕಟ್ಟುಪಾಡುಗಳು ರೀತಿ–ನೀತಿಗಳು, ಕಾನೂನು, ಚೌಕಟ್ಟುಗಳನ್ನು ಗಾಳಿಗೆ ತೂರಿ ಸಮಾಜದ ಭಕ್ಷಕರಾಗಿದ್ದಾರೆಂಬುದು ತುಂಬಾ ದುರಂತದ ಸಂಗತಿಯಾಗಿದೆ.

ಆದ್ದರಿಂದ ಕಾವಿ, ಖಾದಿ, ಖಾಕಿ ಈ ತ್ರಿಮೂರ್ತಿಗಳನ್ನು ಸ್ವಾರ್ಥ ನಿಗ್ರಹ ಮಾಡದೆ ಜನಸೇವೆ ಮಾಡದೇ ಬರೀ ಬೂಟಾಟಿಕೆಯಿಂದ ದೈವದ ಒಲುಮೆ ಪಡೆಯಲು ಸಾಧ್ಯವಿಲ್ಲ ಎಂದು ಎಚ್ಚರಿಸಿದ್ದಾರೆ. ಲಂಚ ಪಡೆಯುವವರಿಗಿಂತ ಲಂಚಕೊಡುವವರೇ ಹೆಚ್ಚು ಭ್ರಷ್ಟರು ಎನ್ನುವ ಚಿಂತನಾಯೋಗ್ಯ ಹೊಸ ವಿಚಾರವನ್ನು ಓದುಗರ ಮುಂದಿಡುವ ಪ್ರಯತ್ನವನ್ನು ತಮ್ಮ ವಚನಗಳಲ್ಲಿ ಮಾಡಿದ್ದಾರೆ. ಅಲ್ಲದೆ ಲಂಚಭ್ರಷ್ಟತೆಗೆ ಕಾರಣರಾರಯ್ಯ ಎಂದು ಚಿಂತಿಸಿ ಕೊಡುವವರಿದ್ದರೆ ತಾನೇ? ತೆಗೆದುಕೊಳ್ಳುವವರೂ ಇರುತ್ತಾರೆ ಎಂಬ ಸಾಧ್ಯತೆಯ ಬಗ್ಗೆ ಯೋಚಿಸುವಂತೆ ಮಾಡಿದ್ದಾರೆ. ಇಂದು ನಮ್ಮ ರಾಜ್ಯದಲ್ಲಿ ಅಷ್ಟೇ ಏಕೆ ನಮ್ಮ ಇಡೀ ರಾಷ್ಟ್ರದಲ್ಲಿ ಆಗುತ್ತಿರುವ ಅನಾಹುತ, ಅಮಂಗಳಗಳಿಗೆಲ್ಲಾ ನೀತಿ ಮುಖ್ಯವಾಗದೇ ಜಾತಿ ಮುಖ್ಯವಾಗದೇ ಜಾತಿ ಮುಖ್ಯವಾಗಿರುವುದೇ ಕಾರಣವೆಂದರಿತ ಅವರ ಪ್ರಬುದ್ಧ ಮನಸ್ಸು.

"ಜಾತಿ ಹಾನಿಕಾರಕ ವಿಷವಯ್ಯ
ಅದು ತನ್ನವರನ್ನು ಬಿಟ್ಟಿಲ್ಲ
ಅದು ಪರರನ್ನು ಬಿಟ್ಟಿಲ್ಲ
ಪ್ರಣವಶ್ರೀ ಪರಂಜ್ಯೋತಿ ಒಲಿದ ವರ್ಗ
ಜಾತಿ ಭಯವಿಲ್ಲ"

(ವಚನ ಜ್ಯೋತಿ ಡಾ. ಕೆ.ಎಸ್.ರತ್ನಮ್ಮ, ಪು. ೧೨೨)

ಎಂದು ಜಾತಿಯ ಅಪಾಯವನ್ನು ಜೊತೆಗೆ ಶರಣರಿಗೆ ಜಾತಿಯೆಂಬುದಿಲ್ಲ ಎಂಬುದನ್ನು ಜ್ಞಾಪಿಸುತ್ತದೆ. ಮೇಲುಕೀಳು ಇಲ್ಲದ ಮನವೇ ಶಿವಾಲಯ ಎಂಬುದು ಅವರ ವಚನದ ಮತ್ತೊಂದು ಶ್ರೇಷ್ಠ ಮಾತು.

ಹೆಣ್ಣು ಯಾರಿಗೂ ಕಡಿಮೆ ಇಲ್ಲ ಅವರಿಗೂ ಪುರುಷನಷ್ಟೇ ಸಮಾನತೆಗಳು ಇರಬೇಕೆಂಬ ಸ್ತ್ರೀಪರ ಒಲುಮೆಯುಕ್ತವಾದ ಮಾನವೀಯತೆಯ ನೆಲೆಯಲ್ಲಿ ಸ್ತ್ರೀ ಬಗ್ಗೆ ಸದಾ ತುಡಿಯುತ್ತಿರುವ ಅಪಾರವಾದ ಕಾಳಜಿಯುಕ್ತ ಮಾತುಗಳು. ಉತ್ಕೃಷ್ಟವಾದ ಪರಿಸರ ಪ್ರಜ್ಞೆ ಬದುಕಿನ ದ್ರವ್ಯದಿಂದಲೇ ಬರವಣಿಗೆಗೆ ಮನೆಯನೊದಗಿಸಿಕೊಂಡ ಅವರು ನಿಷ್ಕಪಟತೆಯ ರೀತಿ, ಎಟುಕದ್ದನ್ನು ಹೇಳದೆ ತಾನು ಅನುಭವಿಸಿದ್ದನ್ನು

ಮಾತ್ರ ಸಹೃದಯನಿಗೆ ಎಟುಕಿಸುವಲ್ಲಿ ಒಬ್ಬ ಗಂಭೀರ ವಚನಕಾರ್ತಿಯಾಗಿ ಅವರು ಗಂಭೀರ ಪ್ರಬುದ್ಧತೆಯನ್ನು ತೋರಿದ್ದಾರೆ. ಪ್ರಭಾವಿತರಾಗಿಯೇ ತಮ್ಮತನವನ್ನು ಉಳಿಸಿಕೊಂಡು ಸುತ್ತಮುತ್ತ ಸಾಯದ ಸಮಸ್ಯೆಗಳಿಗೆ ತಮ್ಮದೇ ಆದ ವೈಚಾರಿಕ ಪ್ರಜ್ಞೆ ಹಾಗೂ ಜೀವನಾನುಭವದಿಂದ ಅವುಗಳಿಗೆ ಪರಿಹಾರ ತೋರಿದ ಪ್ರಾಮಾಣಿಕ ಪ್ರಯತ್ನದ ಪರಿಯಿದೆ.

ಅನುಭವ ಹಾಗೂ ಅನುಭಾವಗಳೆರಡನ್ನೂ ನಿಭಾಯಿಸಿ ಅಭಿವ್ಯಕ್ತಿಸಿದ, ಬರಹಶೈಲಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಸ್ವಯಂ ಅರಿವನ್ನು ಗುರುವಾಗಿಸಿಕೊಳ್ಳುವ ಆ ಮೂಲಕ ಸಮಷ್ಠಿ ಪ್ರಶ್ನೆಗೆ ಪರಿಹಾರಗಳೆರಡನ್ನೂ ವರ್ಗಾಯಿಸಿ ಸೂಕ್ತ ಸಂದೇಶ ರವಾನಿಸುವ ತಮ್ಮ ಸಾಧುತನ ಹಾಗೂ ಸಾಚಾತನಗಳಿಂದ ಸರಾಗವಾಗಿ ಪ್ರತಿಕ್ರಿಯಿಸಿ ಸಹಜ ಸಾಂಪ್ರತ ಮನೋಭಾವ ಮೆರೆಯುವ ಋಣಾತ್ಮಕ ಚಿಂತನೆ, ದೂರವಿರಿಸಿ ಧನಾತ್ಮಕವಾಗಿಯೇ ಎಲ್ಲವನ್ನು ತೆಗೆದುಕೊಂಡು ಓದುಗರಿಗೆ ಆ ಮೂಲಕ ಆದರ್ಶ ತೋರುವ ಒಳಿತು ಕೆಡುಕುಗಳ ಬಗ್ಗೆ ನಾವೆಲ್ಲಾ ಹೊಸದಾಗಿ ಚಿಂತಿಸುವಂತೆ ಮಾಡುವ ಅದೇ ರೀತಿ ಬರಹದಲ್ಲೆಲ್ಲಾ ವರ್ಗ ವಿರೋಧಿ, ಸಂಗವಿರೋಧಿ, ಲಂಚವಿರೋಧಿ, ಅಂತಸ್ತಿನ ತಾರತಮ್ಯ ವಿರೋಧಿ, ಭ್ರೂಣಹತ್ಯೆ, ಶಿಶುಹತ್ಯೆ, ಅಶ್ಲೀಲ ರಾಜಕೀಯ, ಜಾತಿ ವಿರೋಧಿ, ಭ್ರಷ್ಟಾಚಾರವಿರೋಧಿ, ವರ್ಣ ವ್ಯವಸ್ಥೆ ವಿರೋಧಿ ತಾರತಮ್ಯ ವಿರೋಧಿ ಹಾಗೂ ಅಸಹಾಯಕಂ, ಹಿಂದುಳಿದವರ, ದಲಿತ, ದುರ್ಬಲ, ದುಃಖಿತ-ಬಡಬಗ್ಗರ ಪ್ರತಿಧ್ವನಿಯಾಗುವ ನಿಶ್ಚಿತ ಪ್ರಯತ್ನವಿದೆ.

ಭಕ್ತಿ, ಜ್ಞಾನ, ವೈರಾಗ್ಯ, ಕರ್ತವ್ಯ ಪ್ರಜ್ಞೆಗಳ ಬಗ್ಗೆ ದೈವದ ಮೇಲಿನ ತುಂಬಾ ನಂಬಿಕೆಯ ಬಗ್ಗೆ ತನ್ನ ತನದ ಮುದ್ರೆಯೊತ್ತುತ್ತಾ ಅವರು ತೋರುವ ವಿಶ್ವಾಸಯುತ ದೃಷ್ಟಿ ಗಮನಾರ್ಹವಾದುದು. ಒಟ್ಟಾರೆ ಜೀವಾತ್ಮ-ಪರಮಾತ್ಮನ ಬಗ್ಗೆ ಅವರು ತಿಳಿಸಿರುವ ಆಧ್ಯಾತ್ಮಿಕ ವಿಚಾರ, ನಾಡು-ನುಡಿಯ ಬಗ್ಗೆ ಅಪಾರ ಕಾಳಜಿ, ನಕ್ಸಲರ ಬಗ್ಗೆ ಜೆಹಾದಿ ಮುಂತಾದ ಆತಂಕವಾದಿಗಳ ಬಗ್ಗೆ ಅವರು ತೋರುವ ತೀಕ್ಷ್ಣ ಪ್ರಕ್ರಿಯೆ, ದೂರದರ್ಶನದಿಂದಾಗುವ ತೊಂದರೆಗಳ ಬಗ್ಗೆ, ಮಾನವನೇ ಅತಿ ಕ್ರೂರ ಪ್ರಾಣಿ ಎಂಬ ಬಗ್ಗೆ ಅವರು ತಳಮಳಗೊಂಡು ವಿಷಾದದಿಂದ ಪ್ರತಿಕ್ರಿಯಿಸಿ, ನಮ್ಮನ್ನು ಎಚ್ಚರಿಸಿದ್ದಾರೆ. ಅವರು ಎಚ್ಚರಿಸುವ ವಿಧಾನ, ವಿಶ್ವಮಾನವ ಬಸವಣ್ಣನವರ ಜಾತಿ ಹುಡುಕುವ ಹೀನ ಮನಸ್ಸುಗಳ ಬಗ್ಗೆ ಅವರಾಡುವ ಚಾಟುನುಡಿ, ದೇಶಕ್ಕೆ ಅನ್ನ ಹಾಕುವ ರೈತನ ಬಗ್ಗೆ ಅಭಿಮಾನಪೂರ್ಣ ಪ್ರೀತಿಯ ಹಾರೈಕೆ, ಅನುಕಂಪ, ಯಥೋಚಿತವಾಗಿ ಅವರು ಹೇಳುವ ಶ್ರೇಷ್ಠತೆಯ ಗುಣಗಾನ, ಒಂದು ಸುಂದರವಾದ ಸಾದೃಶ್ಯವನ್ನೋ, ದೃಷ್ಟಾಂತವನ್ನೋ ಆರಿಸಿಕೊಂಡು ಓದುಗರೊಡನೆ ಮಾತನಾಡುವ, ಆತ್ಮೀಯತೆಯ ವಿಶಿಷ್ಟ ಶೈಲಿ ಅಲ್ಲಲ್ಲಿ ತರುವ ಸೂತ್ರ, ಸಾದೃಶ್ಯ ಮಾತುಗಳು, ವಚನಗಳ ಆಳವಾದ ಅಧ್ಯಯನದಿಂದ ರೂಪುಗೊಂಡ ಅನನ್ಯ ಧಾಟಿ ಈ

ಮುಂತಾದ ಕಾರಣಗಳಿಂದ ರತ್ನಮ್ಮನವರು, ವಚನಜ್ಯೋತಿಯನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ಬೆಳಗಿದ್ದಾರೆ. ಅಷ್ಟೇ ಅಲ್ಲ ಅವರಿಂದ ತಮ್ಮ ಸುತ್ತ ಮುತ್ತಲು ಕವಿದ ಕತ್ತಲನ್ನು ಓಡಿಸಲೇಬೇಕೆಂಬ ವೈಚಾರಿಕ ಪ್ರಜ್ಞೆಯಿಂದ ತೀವ ಸಹೃದಯದವರಾಗಿ, ಅನುಭಾವಿಯ ನೆಲೆಯಲ್ಲಿ ನಿಂತು ಮಾತನಾಡುತ್ತಾರೆ. ಸಮಷ್ಟಿಯನ್ನು ಪ್ರತಿನಿಧಿಸುವ ತಮ್ಮ ಇಷ್ಟ ದೈವ ಪ್ರಣವಶ್ರೀ ಪರಂಜ್ಯೋತಿಯನ್ನು ಸಾಕ್ಷಿಯಾಗಿಸಿಕೊಂಡು ತುಂಬು ನಂಬಿಕೆಯಿಂದ ತಮ್ಮ ಗೀತಮಾತೆಯ ಜ್ಯೋತಿಯನ್ನು ಬೆಳಗಿದ್ದಾರೆ.

ಕೇವಲ ಬೆರಳೆಣಿಕೆಯಷ್ಟು ಮಂದಿ ಆಧುನಿಕ ವಚನಕಾರ್ತಿಯರಲ್ಲಿ ಕೆ,.ಎಸ್.ರತ್ನಮ್ಮನವರು ಪ್ರಮುಖರಾಗಿ ಕಂಡುಬರುತ್ತಾರೆ. ತಮ್ಮ ಪ್ರಣವಶ್ರೀ ಪರಂಜ್ಯೋತಿಯೆಂಬ ಅಂಕಿತದಲ್ಲಿ ಅವರು ವಚನಗಳ ಮೂಲಕ ಹಚ್ಚಿರುವ ಹಣತೆಯ ಪ್ರಖರತೆಯು ಎಲ್ಲೆಡೆ ಹರಡಿ ನಂದಾದೀಪದಂತೆ ಪ್ರಜ್ವಲಮಾನವಾಗಿ ಬೆಳಗುತ್ತಿದೆ.

ಬಸವಣ್ಣನವರ ಸಮಕಾಲೀನ ಶರಣರೆಲ್ಲರೂ ತಮಗೆ ದೊರೆತ ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ಹಾಗೂ ಸಮಕಾಲೀನ ವಿಚಾರ ಧೋರಣೆಗಳ ವ್ಯಕ್ತರೂಪವಾದ ವಚನಗಳಿಂದ ಪ್ರಭಾವಿತರಾಗಿರುವುದು ಸಹಜವೇ ಸರಿ ತಾವು ರಚಿಸಿದ ತಮ್ಮ ವಿಚಾರಗಳನ್ನು ಅಧಿಕೃತವಾಗಿ ದಾಖಲುಪಡಿಸಿದ್ದಾರೆ. ಎಲ್ಲ ಶರಣರಂತೆ ಬಂದ ವಿಚಾರಗಳು ಸಾಮಾಜಿಕವಾಗಿರಲಿ, ಧಾರ್ಮಿಕವಾಗಿರಲಿ, ಆಧ್ಯಾತ್ಮಿಕ ವಿಚಾರವಾಗಿರಲಿ ಆ ಯುಗದ ವಿಚಾರಗಳಿಗೆ ತಮ್ಮ ಅನುಭವದ ನೆಲೆಯಿಂದ ಕಾಣಿಕೆ ನೀಡಿದ್ದಾರೆಂಬುದನ್ನು ಮರೆಯುವಂತಿಲ್ಲ.

ಒಟ್ಟಾರೆ ಜಡ್ಡುಗಟ್ಟಿದ ಸಮಾಜ ವ್ಯವಸ್ಥೆಯಲ್ಲಿ ಮುಳೆಗುಂಪಾಗಿದ್ದ ಸ್ತ್ರೀಯರು ೧೨ನೇ ಶತಮಾನದ ಕ್ಷಿತಿಜದಲ್ಲಿ ಒಮ್ಮೆಲೇ ಕಾಣಿಸಿಕೊಂಡು ಇಷ್ಟೊಂದು ಸಂಖ್ಯೆಯ ವಚನ ಸಾಹಿತ್ಯ ರಚನೆ ಮಾಡಿ ಅಭಿವ್ಯಕ್ತಿ ಸ್ಪರ್ಶ ನೀಡಲು ಸಾಧ್ಯವಾದದ್ದು ವಚನಕಾರರು ನೀಡಿದ ಸಮಾನತೆಯ ಫಲಶೃತಿ ಎಂಬುದರಲ್ಲಿ ಎರಡು ಮಾತಿಲ್ಲ.

ಬಹುಪಾಲು ಶರಣೆಯರು ವ್ರತಾಚರಣೆಗೆ ಆಧ್ಯತೆ ನೀಡಿದ್ದು ಸಂಪ್ರದಾಯಿಕ ನಿಲುವನ್ನು ಎತ್ತಿ ಹಿಡಿದಂತಿದೆ, ಆದರೂ ವ್ರತ ಎಂಬುದು ಜೀವನ ಒಂದು ನಿಯಮ, ಒಂದು ಶಿಸ್ತು, ಅಸ್ಪೃಶ್ಯ ಸಮುದಾಯದವಳಾಗಿ ಬಡತನದಲ್ಲಿ ಬೆಳೆದು ಕಳ್ಳನಾಗಿದ್ದ ಪತಿಯ ಜತೆ ದುರ್ದೈವದ ಜೀವನ ಸಾಗಿಸುತ್ತಿದ್ದಳು ಕಾಳವ್ವೆ. ಶಿವದೀಕ್ಷೆ ಕಾರ್ಯನೋಡಿ ಪರಿವರ್ತಿತನಾದ ಊಲಿಂಗ ಪೆದ್ದಿ, ಲಿಂಗದೀಕ್ಷೆ ಪಡೆದು ವಿದ್ಯಾಪಾರಂಗತನಾದರೆ ಪತಿಯೊಡನೆ ಕಾಳವ್ವೆ ಕನ್ನಡ – ಸಂಸ್ಕೃತಗಳನ್ನು ಕಲಿತು ೧೪ ವಚನಗಳನ್ನು ರಚಿಸಿದ್ದಾಳೆ. ಕಾಳವ್ವೆಯ ದೃಷ್ಟಿಯಲ್ಲಿ ವ್ರತ ಎಂಬುದು ನಾಯಕ ರತ್ನ ವ್ರತ ಎಂಬುದು ಸುಪ್ಪಾಣಿ ಮುತ್ತು

ಆಭರಣವೇ ಸರ್ವಸ್ವವೆಂದು ತಿಳಿದಿರುವ ಅಂಗನೆಯರ ಬಾಯಲ್ಲಿ ವ್ರತವೇ ಮುತ್ತು, ರತ್ನವೆಂಬ ಮಾತು ಅದೆಷ್ಟು ಅರ್ಥಪೂರ್ಣ.

ಹಿಡಿದ ವ್ರತ ಬಿಡದಿರಲು ಅದೇ ಮಹಾಜ್ಞಾನವೆಂಬುದು ಮುಕ್ತಾಯಿಯ ನಿಲುವು, ಕೆಲವರು ವ್ರತಾಚರಣೆಯ ನೇಮನಿಷ್ಠೆಯನ್ನು ಪ್ರತಿಪಾದಿಸುವಲ್ಲಿ ದಿಟ್ಟ ನಿಲುವಿನ ವಿಡಂಬನೆಯನ್ನು ವ್ಯಕ್ತಪಡಿಸಿದ್ದಾರೆ. ಎಡೆಮಠದ ನಾಗಿದೇವಯ್ಯನವರ ಪತ್ನಿ ಮಸಣಮ್ಮನ ದೃಷ್ಟಿಯಲ್ಲಿ ಭಕ್ತಿ, ನಿಷ್ಠೆ ಇರುವವರಿಗೆ ಮಾತ್ರ ವ್ರತಾಚರಣೆ ಸಾಧ್ಯವೆಂಬ ಅಭಿಪ್ರಾಯವಿದೆ.

"ಕಾಗೆಯ, ನಾಯಿಯ ತಿಂದವರಿಲ್ಲ
ವ್ರತಭ್ರಷ್ಟನ ಕೂಡಿದವರಿಲ್ಲ
ನಾಯಿಗೆ ನಾರಂಗವಕ್ಕುದೇ
ಲೋಕದ ನರಂಗೆ ವ್ರತವಕ್ಕುವುದೇ
ನೀವೆ ಸಾಕ್ಷಿ ನಿಜಗುಣೇಶ್ವರ ಲಿಂಗದಲ್ಲಿ"

ವ್ರತಭ್ರಷ್ಟರನ್ನು ಕುರಿತು ಕಿಡಿ ಕಾರಿರುವ ಶರಣೆ "ಕಾಲಕಣ್ಣಿಯ ಕಾಯಮ್ಮ ವ್ರತಭ್ರಷ್ಟರು ನಿಟ್ಟೊರೆಸುವೆಸುಟ್ಟ ತುರತೊರನೆ ತೊರವನಿರ್ಭೀತ ನಿಜಲಿಂಗಪ್ಪ" ಎಂದರೆ ರೇಚವ್ವೆ ಎಂಬ ಶರಣೆಗೆ ಬಂಜೆಗೆ ಆವಿಂನಕ್ಷೀರವುಂಟೇ ವ್ರತಹೀನನ ಬೆರೆಯಲಾಗದು' ನೀ ಬೆರೆದರೂ ಬೆರೆನಾನೊಲ್ಲೆ ಎನ್ನುವ ದಿಟ್ಟತನವಿದೆ. ಬತ್ತಲೇಶ್ವರ ಪತ್ನಿ ಗುಡ್ಡಪ್ಪತನು ಬತ್ತಲೆಯಾದರೇನು ಮನ ಬತ್ತಲೆಯಾದರೇನು ವ್ರತವಿದ್ದರೇನು ವ್ರತಹೀನನರಾದ ಬಳಿಕ ಎಂದಿದ್ದಾಳೆ. ತಾವು ನಂಬಿದ ವ್ರತಾಚರಣೆಗೆ ತೊಡಗಿ ವ್ರತ ಹೀನರಿಗೆ ವ್ರತದ ಮೌಲಿಕತೆಯನ್ನು ಹೇಳಿ ಮಾರ್ಗದರ್ಶನ ನೀಡಿರುವುದು ಶರಣೆಯರ ನಡೆನುಡಿಗಳ ಸಮನ್ವಯತೆಯ ಸಾಧನೆ ಎನ್ನಬಹುದಾಗಿದೆ.

### ೬) ಸಾಮಾಜಿಕ ವಿಡಂಬನೆ

ಆಧುನಿಕ ವಚನಕಾರ್ತಿಯರೂ ಸಹ ಬಸವಾದಿ ಶರಣರಂತೆ ತಮ್ಮ ಬಹುಪಾಲು ವಚನಗಳನ್ನು ಸಾಮಾಜಿಕ ವಿಡಂಬನೆಗಾಗಿ ಮೀಸಲಿಟ್ಟಿದ್ದಾರೆ. ಆಧುನಿಕ ವಚನಕಾರ್ತಿಯರು ತಮ್ಮ ಒಂದು ಕೈಯನ್ನು ಅಧ್ಯಾತ್ಮಿಕತೆಯ ಕಡೆಗೆ ಚಾಚಿದ್ದರೆ ಮತ್ತೊಂದು ಕೈಯನ್ನು ಸಾಮಾಜಿಕ ವಿಮರ್ಶೆಗೆ ಮುಡುಪಾಗಿಟ್ಟಿದ್ದಾರೆ. ಏಕೆಂದರೆ ಸಾಮಾಜಿಕ ಬದಲಾವಣೆ ಅಥವಾ ಸಾಮಾಜಿಕ ಪರಿವರ್ತನೆಯೇ ವಚನಕಾರರ ಪ್ರಮುಖ ಉದ್ದೇಶವಾಗಿರುವುದರಿಂದ ವಿಮರ್ಶೆ ಹಾಸುಹೊಕ್ಕಾಗಿ ಮೂಡಿಬಂದಿದೆ.

ಬಸವಣ್ಣನವರ ಕಾಲದಲ್ಲಿ, ಹನ್ನೆರಡನೇ ಶತಮಾನದಲ್ಲಿ ಕೆಲವು ಗೊಡ್ಡು ಸಂಪ್ರದಾಯಗಳು, ಅನಿಷ್ಟ ಪದ್ಧತಿಗಳು ಮೂಢನಂಬಿಕೆಗಳು, ಕಂದಾಚಾರ ಮುಂತಾದ ಕೆಟ್ಟ ಆಚರಣೆಗಳು ಕಾಣಸಿಗುವುದರಿಂದ ಆಧುನಿಕ ವಚನಕಾರ್ತಿಯರೂ ಸಹ ಈ ಅಂಶಗಳ ಬಗ್ಗೆ ಗಮನಹರಿಸಬೇಕಾಯಿತು ಹಾಗೂ ಅವುಗಳ ವಿರುದ್ಧ ತೀವ್ರವಾದ ಜನಜಾಗೃತಿಯನ್ನು, ಪ್ರತಿಭಟನೆಗಳನ್ನು ಇವರೂ ಹಮ್ಮಿಕೊಳ್ಳಬೇಕಾಯಿತು.

ಅಸ್ಪೃಶ್ಯತೆ; ದೇವದಾಸಿ ಪದ್ಧತಿ ಬಾಲ್ಯ ವಿವಾಹ, ವರದಕ್ಷಿಣೆ, ಅತ್ಯಾಚಾರ ಮುಂತಾದ ಕೆಟ್ಟ ಆಚರಣೆಗಳ ಬಗ್ಗೆ ಮತ್ತು ವರ್ತನೆಗಳ ಬಗ್ಗೆ ಹೆಚ್ಚು ಗಮನಹರಿಸಲಾಗಿದೆ. ಅಲ್ಲದೆ ಆಧುನಿಕ ಸಮಾಜದಲ್ಲಿ ತಲೆಎತ್ತಿರುವಂತಹ ಕೊಲೆ, ಸುಲಿಗೆ, ದರೋಡೆ, ಲೈಂಗಿಕ ಕಿರುಕುಳ, ಭ್ರಷ್ಟಾಚಾರ, ಹೆಣ್ಣುಭ್ರೂಣ ಹತ್ಯೆ, ಸ್ತ್ರೀನಗ್ನ ನತ್ಯಗಳು, ಅಶ್ಲೀಲ ಸಾಹಿತ್ಯಗಳು, ಅಶ್ಲೀಲ ಚಲನ ಚಿತ್ರಗಳು ಮುಂತಾದ ಹಲವಾರು ಸಮಸ್ಯೆಗಳ ಬಗ್ಗೆ ವಚನಕಾರ್ತಿಯರು ಬೆಳಕು ಚೆಲ್ಲಿದ್ದಾರೆ. ಅಲ್ಲದೆ ಅಂತಹ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಸೂಚಿಸುವುದರ ಮೂಲಕ ಸಮಾಜದ ಸ್ವಾಸ್ಥ್ಯ ಕಾಪಾಡುವ ಪ್ರಯತ್ನಮಾಡಿದ್ದಾರೆ. ಇಂದಿನ ಆಧುನಿಕ ಸ್ತ್ರೀಯರು ಪ್ರತಿನಿತ್ಯ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿ ಅವರ ಕಷ್ಟಗಳಿಗೆ ಸ್ಪಂದಿಸುವುದರ ಮೂಲಕ ಸ್ತ್ರೀಲೋಕದ ಆಶಾಕಿರಣವಾಗಿ ಬೆಳಗಿದ್ದಾರೆ.

ಜಾತಿ ಭೇದ, ಲಿಂಗಭೇದ, ಧರ್ಮಭೇದ ಹಾಗೂ ವರ್ಣಭೇದಗಳನ್ನು ಖಂಡಿಸಿದ್ದಾರೆ. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು, ಎಲ್ಲಾ ಕೆಲಸಗಳು ಪವಿತ್ರವಾದವುಗಳು ಎಂದು ತಿಳಿಸಿದ್ದಾರೆ. ಶ್ರೀಮಂತರು ಬಡವರ, ದೀನದಲಿತರ, ಹಿಂದುಳಿದ ವರ್ಗಗಳ ಮೇಲೆ ನಡೆಸುತ್ತಿರುವ ದಬ್ಬಾಳಿಕೆ, ದೌರ್ಜನ್ಯಗಳನ್ನು ಖಂಡಿಸಿದ್ದಾರೆ. 'ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು' ಎಂಬ ಘೋಷಣೆಯೊಂದಿಗೆ ಸಮಾಜದಲ್ಲಿ ಸಮಾನತೆಯನ್ನು ಸ್ಥಾಪಿಸುವ ಪ್ರಯತ್ನವನ್ನು ಮಾಡಿದ್ದಾರೆ ಹಾಗೂ ಸರ್ವಶೋಷಣೆಗಳಿಂದ ಮುಕ್ತವಾದ ಶಾಂತಿ-ಸುಖೀ ಸಾಮ್ರಾಜ್ಯದ ಸ್ಥಾಪನೆಯ ಕನಸನ್ನು ಕಾಣುತ್ತಿದ್ದಾರೆ. ಯಾರು ಯಾರನ್ನೂ ಆಳಬಾರದು, ಯಾರು ಯಾರ ಮೇಲೂ ದಬ್ಬಾಳಿಕೆ ದೌರ್ಜನ್ಯಗಳನ್ನು ಮಾಡುವಂತಿಲ್ಲ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಸರ್ವತಂತ್ರ ಸ್ವತಂತ್ರರಾಗಿ ಬಾಳಬೇಕು ಎಂಬ ಮಹದಾಸೆಯನ್ನು ಹೊಂದಿದ್ದಾರೆ.

ಸಮಾಜದಲ್ಲಿ ಗಣ್ಯವ್ಯಕ್ತಿಗಳೆನಿಸಿದಂತಹ ರಾಜಕೀಯ ವ್ಯಕ್ತಿಗಳು, ಮಠಾಧೀಶರುಗಳು ಹಾಗೂ ಖಾಕಿಧಾರಿಗಳು ಸಮಾಜ ಸೇವೆಯ ಹೆಸರಿನಲ್ಲಿ ನಡೆಸುತ್ತಿರುವ, ಮೋಸ, ವಂಚನೆ, ದ್ರೋಹ ಮತ್ತು ಕಪಟನೀತಿಗಳನ್ನು, ಪೊಳ್ಳುಭರವಸೆಗಳನ್ನು ಎಳೆ-ಎಳೆಯಾಗಿ ವಿವರಿಸಿದ್ದಾರೆ. ಇನ್ನು ಸಮಾಜದಲ್ಲಿ

ಬುದ್ಧಿಜೀವಿಗಳೆನಿಸಿದ ವೈದ್ಯರು, ಅಭಿಯಂತರರು ಹಾಗೂ ಶಿಕ್ಷಣಾಧಿಕಾರಿಗಳು ಹೇಗೆ ಸಮಾಜವನ್ನು ದಾರಿತಪ್ಪಿಸುತ್ತಾರೆ. ಅಮಾಯಕ, ಮುಗ್ಧ ಜನರನ್ನು ಹೇಗೆ ಬಲಿತೆಗೆದುಕೊಳ್ಳುತ್ತಾರೆ ಎಂಬುದರ ಬಗ್ಗೆ ನಮ್ಮ ಗಮನಸೆಳೆದಿದ್ದಾರೆ. ಹನ್ನೆರಡನೇ ಶತಮಾನ ಜಾತಿ–ವರ್ಗ–ವರ್ಣ ಮೊದಲಾದ ಕಂದಕದಲ್ಲಿ ಜನತೆಯನ್ನು ಸಿಕ್ಕಿಸಿ ಬಳಲಿಸುತ್ತಿದ್ದ ಕಾಲವದು. ಮಾಡುವ ವೃತ್ತಿಯಿಂದಲೇ ಜಾತಿ ನಿರ್ಮಾಣವಾಗಿ ದುಡಿಯುವ ಶ್ರಮವಂತರೆಲ್ಲಾ ಶೂದ್ರರೆಂದು, ಅಸ್ಪೃಶ್ಯರೆಂದು ಶೋಷಣೆಗೆ ಒಳಗಾದ ಕಾಲವದು. ಸ್ತ್ರೀಸಮಾಜವೆಲ್ಲಾ ಹೆತ್ತ ತಾಯಿಯನ್ನು ಮೊದಲ್ಗೊಂಡು ಮಡದಿ–ಮಕ್ಕಳವರೆಗೆ ಧ್ವನಿಯನ್ನು ಕಳೆದುಕೊಂಡು ಮಾಯೆಯೆಂಬ ಪಟ್ಟದಲ್ಲಿ ಸೂತಕದ ಮೊಟ್ಟೆಗಳಾಗಿ ತುಳಿಯಲ್ಪಟ್ಟಿದ್ದ ಕಾಲವದು. ಶೂದ್ರರಾಗಿ ಅಸ್ಪೃಶ್ಯರಾಗಿ ಹುಟ್ಟಿರುವುದು. ಪಾಪಕರ್ಮಗಳ ಫಲ ಎನ್ನುತ್ತಿದ್ದ ಪಂಡಿತರ ಶೋಷಣೆಗೆ ಒಳಗಾದ ಕಾಲವದು. ದೇವರು ಸಹ 'ದುಷ್ಟ–ಶಿಕ್ಷಕ–ಶಿಷ್ಟರಕ್ಷಕ' ಎಂದು ಹೇಳಿ ಕಷ್ಟ ಜೀವಿಗಳನ್ನು ದುಡಿಯುವ ಶ್ರಮವಂತರನ್ನು ಶಿಕ್ಷೆಗೆ ಒಳಪಡಿಸಿ ಶೋಷಣೆ ಮಾಡಿದ ಕಾಲವದು. ಮೂಢನಂಬಿಕೆಗಳಿಗೆ ಬಲಿಯಾಗಿ ಪಾಪಪುಣ್ಯದ ಕಲ್ಪನೆಯಲ್ಲಿ, ಸ್ವರ್ಗ–ನರಕಗಳ ಕಪೋಲ ಕಲ್ಪಿತ ವಿಚಾರಗಳಿಗೆ ಸಿಲುಕಿ ತಮ್ಮ ದುರ್ಗತಿಯಿಂದ ಪ್ರಾಣಿಗಿಂತಲೂ ಕೀಳಾಗಿ ಜೀತದಿಂದ ಜೀವಿಸಿದ ಕಾಲವದು. ಇಂಥ ಅಂಧಕಾರವನ್ನು ಹೋಗಲಾಡಿಸಿ ಬೆಳಕನ್ನು ನೀಡುವಂಥ ಜ್ಯೋತಿಯ ಉದಯವಾಯಿತು. ಅವರೇ ಜಗಜ್ಯೋತಿ ಬಸವಣ್ಣನವರು. ಕಾಯವನ್ನು – ಕಾಯಕವನ್ನು ಕೈಲಾಸವಾಗಿಸಿದ ಮಹಾಗುರು ಬಸವೇಶ್ವರರು.

ಎಲ್ಲ ದಾಸ್ಯಗಳಿಂದ ಬಿಡುಗಡೆ, ಸ್ತ್ರೀವಿಮೋಚನೆ, ಅಸ್ಪೃಶ್ಯತಾ ನಿವಾರಣೆ, ಕರ್ಮ–ಕಂದಾಚಾರ, ಮೂಢನಂಬಿಕೆ ಮುಂತಾದವುಗಳನ್ನು ನಾಶಗೈದಿದ್ದಲ್ಲದೆ ದಿವ್ಯ ಅರಿವಿನ – ಅಮೃತಪಾನ ಮಾಡಿಸಿದ್ದು ಇತಿಹಾಸ ಹಿಂದೆಂದೂ ಕಾಣದ ದಿವ್ಯದರ್ಶನವನ್ನು ಕಂಡಿತು. ಇದೆಲ್ಲದಕ್ಕೂ ಕಾರಣ ತಾನು ಕಿರಿಯನಾಗಿ ಜಗತ್ತನ್ನು ಹಿರಿತನಕ್ಕೆ ಬೆಳೆಸಿದ ಪತಿತ – ಪಾವನಮೂರ್ತಿ ಶ್ರೀಮಹಾಗುರು ಬಸವೇಶ್ವರರು.

ವಚನ ಎಂಬ ಶಬ್ದ ಕಿವಿಗೆ ಬಿದ್ದ ತಕ್ಷಣ ಹನ್ನೆರಡನೇ ಶತಮಾನದ ಕನ್ನಡ ಸಾಹಿತ್ಯ ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ಭಾರತೀಯ ಸಾಹಿತ್ಯ ಪರಂಪರೆಯಲ್ಲಿಯೇ ಅಪೂರ್ವ ಕೊಡುಗೆ ಎನಿಸಿದ ಒಂದು ಅನನ್ಯ ಸಾಹಿತ್ಯ ಪ್ರಕಾರ ಅಂದಿನ ಶಿವ ಶರಣರು ರಚಿಸಿದ ವಚನಗಳು ಉಳಿದ ಸಾಹಿತ್ಯದಂತೆ ಜನಮೆಚ್ಚುಗೆಗಾಗಿ ಸೃಷ್ಟಿಯಾದುದಲ್ಲ – ವಚನ ಸಾಹಿತ್ಯ. ಅದು ಸೃಷ್ಟಿಯಾದುದು ಆತ್ಮ ನಿರೀಕ್ಷಣೆಗೆ ಆಧ್ಯಾತ್ಮ ಸಾಧನೆಗೆ ಮತ್ತು ಜನಮನ ಪರಿವರ್ತನೆಗೆ ವಚನಕಾರರು ನಡೆನುಡಿಯೊಂದಾಗಿ ಬರೆದವರು ಎಂತಲೇ ಅವರು ರಚಿಸಿದ ವಚನಗಳು ಮಾನವ ಸಮುದಾಯಕ್ಕೆ ಸಾರ್ವಕಾಲಿಕ ಸಂದೇಶಗಳೇ ಆದವು.

ವಚನ ಸಾಹಿತ್ಯ ಒಂದು ಚಳವಳಿಯಾಗಿ ಸೃಷ್ಟಿಯಾಯಿತು. ಆಗ ಪ್ರಚಲಿತವಿದ್ದ ಪಂಡಿತ ಸಾಹಿತ್ಯ ಖಂಡನೆಗೆ ಒಳಗಾಯಿತು. ಸಾಹಿತ್ಯ ಜನಮುಖಿಯಾಯಿತು. ಜನಪರವಾಯಿತು. ಅದುವರೆಗೆ ಸಾಹಿತ್ಯ ರಚನೆಗಿದ್ದ ಕಟ್ಟುಪಾಡುಗಳನ್ನು ವಚನಕಾರರು ಕಿತ್ತುಹಾಕಿದರು. ಪದ್ಯವೂ ಅಲ್ಲದ ಗದ್ಯವೂ ಅಲ್ಲದ ಹೊಸದೊಂದು ಸಾಹಿತ್ಯ ಪ್ರಕಾರವನ್ನೇ ಹುಟ್ಟು ಹಾಕಿದರು. ಹೀಗಾಗಿ ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಹನ್ನೆರಡನೇ ಶತಮಾನ ಒಂದು ಕ್ರಾಂತಿಘಟ್ಟವೆಂದು ದಾಖಲಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ವಚನಸಾಹಿತ್ಯ ಪಿತಾಮಹಾರೆಂದೇ ಕರೆಯಲ್ಪಟ್ಟಿರುವ ಫ.ಗು.ಹಳಕಟ್ಟಿ ಅವರು ಕಾಲಗರ್ಭದಲ್ಲಿ ಅಡಗಿದ್ದ ಹನ್ನೆರಡನೆಯ ಶತಮಾನದ ಶಿವಶರಣರ ವಚನಗಳನ್ನು ಬೆಳಕಿಗೆ ತಂದಮೇಲೆ ಆಧುನಿಕ ವಚನಕಾರರು ಸಾಕಷ್ಟು ಸಂಖ್ಯೆಯಲ್ಲಿ ಕಾಣಿಸಿಕೊಂಡಿದ್ದಾರೆ.

ಆಧುನಿಕ ವಚನ ಸಾಹಿತ್ಯ ಹಿಂದಿನ ವಚನ ಸಾಹಿತ್ಯಕ್ಕಿಂತ ಭಿನ್ನವಾಗಿದೆ. ಇಂದಿನ ವಚನ ಸಾಹಿತ್ಯ ಆಧುನಿಕ ವಿಮರ್ಶಕರ ಗಮನವನ್ನು ಇನ್ನು ಸೆಳೆಯಬೇಕಾಗಿದೆ. ಉಳಿದ ಸಾಹಿತ್ಯ ಪ್ರಕಾರಗಳಂತೆ ಆಧುನಿಕ ವಚನ ಸಾಹಿತ್ಯ ಪ್ರಕಾರ ಅಪೇಕ್ಷಿತ ಮಟ್ಟದಲ್ಲಿ ವಿಮರ್ಶೆಗೆ ಒಳಗಾಗಬೇಕಾಗಿದೆ.

ಆಧುನಿಕ ವಚನ ಸಾಹಿತ್ಯ ಲೋಕದಲ್ಲಿ ಹೆಸರು ಮಾಡಿರುವ ಪ್ರೊ. ಕೆ.ಆರ್.ಪ್ರೇಮಲೀಲಾ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ಸ್ನಾತಕೋತ್ತರ ಪದವಿ ಪಡೆದಿರುವ ಪ್ರೇಮಲೀಲಾ ಕನ್ನಡದಲ್ಲಿ ವಚನ ರಚಿಸುವುದರಲ್ಲಿ ಪರಿಣಿತರಾಗಿರುವುದು ಒಂದು ವಿಶೇಷ ಈಗಾಗಲೇ ಸಾಹಿತ್ಯ ಲೋಕಕ್ಕೆ ಪ್ರವೇಶಮಾಡಿರುವ ಇವರದು ಸದ್ದಿಲ್ಲದ ಸಾಹಿತ್ಯ ಸೇವೆ.

'ಪ್ರೇಮಾಂಜಲಿ' ಕೃತಿ ಪ್ರೇಮಲೀಲಾ ಅವರು ರಚಿಸಿರುವ (ನೂರಾಎಂಟು) ೧೦೮ ವಚನಗಳ ಸಂಗ್ರಹ. ಇಲ್ಲಿನ ವಚನಗಳಿಗೆ ಹನ್ನೆರಡನೆಯ ಶತಮಾನದ ವಚನಗಳೇ ಸ್ಫೂರ್ತಿಯಾಗಿವೆ. ಶರಣರ ವಚನಗಳಂತೆ ಇವರ ವಚನಗಳಲ್ಲಿ ಮೃದುನುಡಿ, ಸದ್ವಿನಯಗಳನ್ನು ಕಾಣಬಹುದು. ಅಂರತಂಗ ಮತ್ತು ಬಹಿರಂಗ ಶುದ್ಧಿಯ ಹಂಬಲವನ್ನು ಕಾಣಬಹುದು. ಇಲ್ಲಿನ ವಚನಗಳಲ್ಲಿ ಯಾವುದೇ ಭಾಷಾ ಬೆಡಗು ಭಿನ್ನಾಣಗಳಿಲ್ಲ. ಪ್ರಾಮಾಣಿಕತೆ ಮತ್ತು ಪಾರದರ್ಶಕತೆ ಇಲ್ಲಿನ ವಚನಗಳ ಜೀವನಾಡಿ. ವಚನಕಾರ್ತಿ ಶರಣರಂತೆಯೇ ಯಾರ ಮೆಚ್ಚುಗೆಗೂ ಈ ವಚನಗಳನ್ನು ರಚಿಸಿಲ್ಲ. ಇವು ನಿಚ್ಚಳ ಅಂತರಂಗದ ನಿರ್ಮಲ ಅಭಿವ್ಯಕ್ತಿಯಾತಿವೆ.

"ವ್ಯರ್ಥ ಕಾಲ ಕಳೆಯುವುದಕ್ಕಿಂತ ವಚನ ರಚನೆಯಲ್ಲಿ ತೊಡಗುವುದು ಲೇಸು" ಎಂದು ವಚನಕಾರ್ತಿ ತಮ್ಮ ರಚನೆಯ ಹಿಂದಿನ ಸದುದ್ದೇಶವನ್ನು ತಿಳಿಸುತ್ತಾರೆ. ಲೋಕ ತಿಳುವಳಿಕೆಗಾಗಿ ಸಾಧು

ಹೇಳುತ್ತಿದ್ದೇನೆ ಎಂಬ ಅಹಂಕಾರ ಅವರಿಗಿಲ್ಲ. ಇಲ್ಲಿನ ಬಹುತೇಕ ವಚನಗಳಲ್ಲಿ ಕಂಡುಬರುವ ಸಂವೇದನೆಯೆಂದರೆ, ಆತ್ಮ ನಿವೇದನೆ. ಬುದ್ಧಿ ಭಾವಗಳ ಮಧ್ಯೆ ಸಾಮರಸ್ಯವಿಲ್ಲದ ಆಯುಷ್ಯ ವ್ಯರ್ಥವೆನ್ನುವ ವಚನಕಾರ್ತಿ ಆಶಿಸುವುದು ಶುದ್ಧಕಾಯಕ ಮಾಡುವ ಬುದ್ಧಿಯನ್ನು, ಬದ್ಧದೀಪವನ್ನು ಬೆಳಗುವ ಶ್ರದ್ಧೆಯನ್ನು, ಪ್ರೇಮಲೀಲಾ ಅವರ ವೈಚಾರಿಕ ಚಿಂತನೆಗೆ ಸಾಕ್ಷಿಯಾಗಿ ಅವರ ಒಂದು ವಚನ.

"ಮೂಢನಂಬಿಕೆ ಎಂಬ ಕುರಿ ಮಾರಿಗೆ ಬಲಿಯಾಗಲಿ
ಸಾರ್ಥವಂಚನೆಯ ಕೋಳಿ ಕಾಳಿಗೆ ಬಲಿಯಾಗಲಿ
ಆಲಸ್ಯವೆಂಬ ಆಡು ದುರ್ಗೆಗೆ ಬಲಿಯಾಗಲಿ"
ಅರಿಷಡ್ವರ್ಗದ ಕೋಣ ಭೈರವಿಗೆ ಬಲಿಯಾಗಲಿ
'ಬಲಿ' ಎಂಬ ಅನಿಷ್ಠ ಪದ್ಧತಿ ಭೂತ ಪೆಡಂಭೂತಗಳಿಗೆ ಬಲಿಯಾಗಲಿ
ಮಾಟಮಂತ್ರ, ತಂತ್ರ-ಕುತಂತ್ರಗಳು
ಗಣಕ ಯಂತ್ರದಲಿ ಬಯಲಾಗಲಿ
ವಿಜ್ಞಾನದಿಂದ ಅಜ್ಞಾನ ದೂರಾಗಲಿ
ಅಹಿಂಸೆ ಎಲ್ಲೆಡೆ ಲಾಸ್ಯವಾಡಲಿ ಇದಕೆ ನಿನ್ನ ಕೃಪೆಯಿರಲಿ"

ಇಲ್ಲಿ ಲೇಖಕಿಯರ ವೈಚಾರಿಕ ಪ್ರಜ್ಞೆ ಎದ್ದುಕಾಣುತ್ತದೆ. ಹೊರಗಿನ ಪ್ರಾಣಿಗಳ ಬಲಿಗಿಂತ ನಮ್ಮೊಳಗಿನ ಪ್ರಾಣಿ ಸಹಜ ಗುಣಗಳ ಬಲಿಕೊಡಬೇಕಾದದ್ದು ಇಂದಿನ ತುರ್ತು ಅವಶ್ಯಕತೆಯಾಗಿದೆ. ಲೇಖಕಿ ಸಮಾಜದ ತೋರುಬೆರಳುಗಳಾಗಿರುವುದು ಇಂತಹ ಅಭಿವ್ಯಕ್ತಿ ಕ್ರಮದಿಂದಲೇ ಎಂದು ಹೇಳಬಹುದು.

ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರಭಾವದಿಂದಾಗಿ ಮಾನವೀಯ ಸಂಬಂಧಗಳು ಶಿಥಿಲಗೊಳ್ಳುತ್ತಿವೆ. ಗುರು-ಹಿರಿಯರಿಗೆ ಮೇಲಿನ ಭಕ್ತಿ ಗೌರವಗಳು ಕಡಿಮೆಯಾಗುತ್ತಿವೆ. ಇಂದಿನ ತರುಣ-ತರುಣಿಯರು ದೂರದರ್ಶನದ ಮುಂದೆ ಕುಳಿತು ವೀಕ್ಷಿಸುವುದರಲ್ಲೇ ತಮ್ಮ ಅಮೂಲ್ಯ ಸಮಯವನ್ನು ವ್ಯರ್ಥಗೊಳಿಸುತ್ತಿದ್ದಾರೆ. ಅವರ ಬದುಕು ಯಾಂತ್ರಿಕಗೊಳ್ಳುತ್ತಿದೆ. ಇದರಿಂದ ಕುಟುಂಬದ ಸದಸ್ಯರ ಮಧ್ಯ ಪರಸ್ಪರ ಪ್ರೀತಿ ವಿಶ್ವಾಸ, ನಂಬಿಕೆಗಳು ಕಡಿಮೆಯಾಗಿ ಕೌಟುಂಬಿಕ ಅಶಾಂತಿಗೆ ಕಾರಣವಾಗುತ್ತವೆ. ಅಲ್ಲದೆ ದೂರದರ್ಶನದ ವೀಕ್ಷಣೆಯಲ್ಲಿ ಪೈಪೋಟಿ ನಡೆಸುತ್ತಿರುವುದರಿಂದ ನಾನಾ ರೀತಿಯ ಅಸಮಾಧಾನ, ನಿರುತ್ಸಾಹ, ಅಸೂಯೆಗಳಿಗೆ ಕಾರಣವಾಗಿ ಪರಸ್ಪರ ಜಗಳ-ದೂಷಣೆಗಳಿಂದಾಗಿ ಕುಟುಂಬ ನೆಮ್ಮದಿ ಕಡಿಮೆಯಾಗಿದೆ. ಪ್ರೊ. ಪ್ರೇಮಲೀಲಾ ಅವರು ಬಸವಣ್ಣನವರ ವಚನದಿಂದ ಪ್ರಭಾವಿತರಾಗಿ ಆಧುನಿಕ ಯುವಕ-ಯುವತಿಯರ ಮನೋಭಾವನೆಗಳಿಗೆ ತಕ್ಕಂತೆ ಹೊಸ ಭಾಷ್ಯ

ಬರೆದಿದ್ದಾರೆ. ಬಸವಣ್ಣನವರ ಸಾಹಿತ್ಯದಿಂದ ಪ್ರಭಾವಿತರಾದರೂ ತಮ್ಮದೇ ಆದ ಸ್ವಂತ ಪ್ರತಿಭೆಯನ್ನು ಮೆರೆದಿದ್ದಾರೆ.

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯ
ಬಡತನವೆಂಬ ಮಂತ್ರವಾದಿಯು ಮನೆಗೆ ಹೋಗಲು
ಒಡನೆ ನುಡಿವರಯ್ಯ, ಕೂಡಲ ಸಂಗಮದೇವ

**ಪ್ರೇಮಲೀಲಾ ವಚನ**

"ತರುಣಿ ತಾರೆಯನು ನುಡಿಸಬಹುದು
ದರ್ಪಾಧಿಕಾರಿಗಳನ್ನು ನುಡಿಸಬಹುದು
ಆಗರ್ಭ ಶ್ರೀಮಂತರನು ನುಡಿಸಬಹುದು
ಟಿ.ವಿ. ಮುಂದೆ ಕುಳಿತವರ ನುಡಿಸಲಾಗದು ನೋಡಾ
ವಿದ್ಯುತ್ ಎಂಬ ಶಕ್ತಿ ನಿಲುಗಡೆಯಾದೊಡನೆ ನುಡಿಯುವ
ಇವರ ನೋಡಿ ಮಂದಹಾಸ ಬೀರುತಿಹನು
ಪ್ರೇಮಸಿಂಧು ಪರಮಬಂಧು ಮಲ್ಲೇಶ"

ಹೀಗೆ ಪ್ರೇಮಲೀಲಾ ಅವರು ತಮ್ಮ ವಚನಗಳಿಗೆ ಅನೇಕ ಸಂದರ್ಭಗಳಲ್ಲಿ ಶರಣರ ವಚನಗಳ ತಂತಿಯನ್ನೇ ಮಿಡಿದು ತಮ್ಮ ಹೊಸ ಶೃತಿಗೆ ನವನಾದ ಮೂಡಿಸುತ್ತಾರೆ. ಇದೂ ಕೂಡ ಅವರ ವಚನ ರಚನೆಯ ಒಂದು ಕೌಶಲ್ಯವೇ ಆಗಿದೆ.

ಈ ವಚನಕಾರ್ತಿಗೆ ಅಂಗವಿಕಲರ ಬಗೆಗೆ ಅಪಾರ ಅನುಕಂಪವಿದೆ. 'ವಿದ್ಯೆಗೂ' 'ಪದವಿ'ಗೂ ಇರುವ ವ್ಯತ್ಯಾಸದ ಅರಿವಿದೆ. ಸಂಸ್ಕೃತಿ, ಸಂಸ್ಕಾರಗಳು, ನೀತಿ, ಪ್ರೀತಿ, ದಯೆ, ಅಹಿಂಸೆ, ದೇಶಭಕ್ತಿಗಳ ಮೊತ್ತ ಎನ್ನುವ ಪರಿಜ್ಞಾನವಿದೆ. ಬದುಕಿನ ಏಳುಬೀಳುಗಳಿಗೆಲ್ಲಾ ನಮ್ಮೊಳಗಿನ ಅಹಂ ಕಾರಣ' ಎನ್ನುವ ಗಂಭೀರ ಚಿಂತನೆಯಿದೆ. ಇವರಿಗೆ ಹಂಗಿಲ್ಲದರಮನೆ ಕಟ್ಟುವ ವಿಶ್ವಾಸವಿದೆ. ಹಸುರೀಕರಣ ವಿಚಾರಗೋಷ್ಠಿಯ ಚಪ್ಪರಕ್ಕಾಗಿ ಹಸಿರು ಗಿಡಗಳನ್ನು ಕಡಿಯುವ ವಿಪರ್ಯಾಸ'ದ ಬಗೆಗೆ ಇವರಿಗೆ ವ್ಯಸನವಿದೆ. ಸಂಸಾರದಲ್ಲಿದ್ದು ಸಾರ್ಥಕ ಬದುಕು ನೆಡೆಸಿದ ಶರಣರ ಆದರ್ಶ ಇವರ ಮುಂದಿದೆ. ಹೀಗೆ ಈ ವಚನಕಾರ್ತಿ ಬದುಕಿನ ಸುತ್ತಮುತ್ತಲಿನ ಸಂಗತಿಗಳನ್ನು ತಮ್ಮ ವಚನಗಳಲ್ಲಿ ವಿಶ್ಲೇಷಿಸಿದ್ದಾರೆ.

ಪ್ರೊ. ಪ್ರೇಮಲೀಲಾ ಅವರು ಸಾಮಾಜಿಕ ಪರಿಸರವನ್ನು ಚಿಕಿತ್ಸಕ ದೃಷ್ಟಿಯಿಂದ ನೋಡಿ ಅಂದವಿದ್ದ ಕಡೆ ಆನಂದಿಸಿ, ಕುಂದಿದ್ದ ಕಡೆ ನೊಂದು ಪರಿಶುದ್ಧ ಪರಿಸರಕ್ಕಾಗಿ ಹಾರೈಸುತ್ತಾರೆ. ಅವರ ವಚನಗಳು, ಸಭ್ಯ ನಡೆ, ಸತ್ಯನುಡಿ, ಸ್ವಚ್ಛಮನ, ಚಿತ್ತಸ್ಥೈರ್ಯ, ಶ್ರಮದದುಡಿಮೆ, ಕರ್ತವ್ಯಪ್ರಜ್ಞೆ, ಜೀವದಯೆ, ಸಹಬಾಳ್ವೆ, ಕಲಾಭಿರುಚಿ, ದೈವೀಶ್ರದ್ಧೆ. ಈ ಎಲ್ಲ ಮಾನವೀಯ ಮೌಲ್ಯಗಳನ್ನು ಸರಳ ಭಾಷೆ, ಸರಳಶೈಲಿಯಲ್ಲಿ ತಿಳಿಸುವಲ್ಲಿ ಯಶಸ್ವಿಯಾಗಿವೆ. ಕೆಲವು ವಚನಗಳಲ್ಲಿ ಅವರ ಆಧ್ಯಾತ್ಮಿಕ ಹಂಬಲ ತುಂಬಿಕೊಂಡಿದೆ. ವಚನ ಸಾಹಿತ್ಯದ ಬಗೆಗೆ ಅವರಿಗಿರುವ ಅಭಿಮಾನ, ಆಸಕ್ತಿ ಮತ್ತು ಶ್ರದ್ಧೆಗಳು ಎಷ್ಟು ಗಾಢ ಎಂಬುದಕ್ಕೆ "ವಚನಗಳನ್ನು ಓದದಾ ಕಣ್ಣುಗಳು ಬರೆಯದಾ ಪೆನ್ನಿನಂತೆ ವ್ಯರ್ಥ" ಎಂಬ ಅವರ ಮಾತೇ ಸಾಕ್ಷಿ.

ಪ್ರೇಮಲೀಲಾ ಅವರ ಈ ಆಧುನಿಕ ವಚನಗಳು ಓದುಗರ ಗಮನ ಸೆಳೆಯುವಲ್ಲಿ ಸಂಶಯವಿಲ್ಲ. ಇದು ಅವರ ವಚನಗಳ ಮೊದಲ ಸಂಗ್ರಹ ಮೊದಲ ಪ್ರಯತ್ನದಲೇ ಪರಿಣಾಮಕಾರಿ ವಚನಕಾರ್ತಿಯಾಗಿ ಕಾಣಿಸಿಕೊಂಡಿದ್ದಾರೆ. "ಆತ್ಮಾವಲೋಕನಕ್ಕೆ ಅವಕಾಶವಿರುವ ವಚನ ರಚನೆಯನು ಬಿಡೆನು" ಎಂಬ ಛಲತೊಟ್ಟಿರುವ ಈ ವಚನಕಾರ್ತಿ ಶರಣರ ಹಾದಿ ಹಿಡಿದಿದ್ದಾರೆ. ಅವರೇ ಹೇಳುವಂತೆ ಬದುಕನ್ನು ಕಲೆಯೆಂದು ತಿಳಿದು ಬಾಳಿದ ಶರಣರಿಗೆ ಬಹಳ ಬೆಲೆ, ಬಹಳ ಬೆಲೆ!

"ಅನುಭಾವಿಗಳ ಅಂತರಂಗದಿಂದ ಬಂದ ವಚನಗಳಲ್ಲಿ?
ಅಕ್ಷರಜ್ಞಾನದಿಂದ ಬಂದ ನನ್ನ ಈ ಸಾಲುಗಳೆಲ್ಲಿ?
ಇವುಗಳನು ವಚನಗಳೆಂದರೆ ನಗದಿರುವರೆ ಗುರುಗಳು?
ಆದರೂ, ವ್ಯರ್ಥ ಕಾಲಹರಣಕ್ಕಿಂತ ವಚನಗಳ ರಚನೆಯಲಿ
ತೊಡಗುವುದು ಲೇಸೆಂದ ಪ್ರೇಮಸಿಂಧು, ಪರಮಬಂಧು ಮಲ್ಲೇಶ"
(ಪ್ರೇಮಾಂಜಲಿ – ಪ್ರೊ. ಕೆ.ಆರ್.ಪ್ರೇಮಲೀಲಾ ಪುಟ ಸಂಖ್ಯೆ – ೦೧)

ಅಕ್ಕನ ಸಮಸ್ಯೆಯ ಪರಿ ಒಂದಾದರೆ, ಆಧುನಿಕ ಮಹಿಳೆಯರ ಪರಿ ಇನ್ನೊಂದು ತೆರೆವಾದದ್ದು. ಅದರಲ್ಲೂ ದುಡಿಯುವ ಲೇಖಕಿಯ ಸ್ವಾನುಭವ ಇಂತಹ ಎಲ್ಲ ಮಹಿಳೆಯರ ಸಮಸ್ಯೆಯೂ ಹೌದು.

"ದುಡಿಯುವ ಮಹಿಳೆಯ ಸಂಕಟ ದುಡಿಯುವವರಿಗೇ ಗೊತ್ತು
ಹೆರಿಗೆಯ ಬೇನೆ ಹೆತ್ತವಳೆ ಬಲ್ಲಳು
ತಾಳಿ ಕಟ್ಟಿಹೆನೆಂದು ಗಂಡನು ಗುಡುಗುವನು
ಕೆಲಸ ಕೊಟ್ಟಿಹನೆಂದು ಅಧಿಕಾರಿ ಅರಚುವನು

ಅಕಟಕಟಾ, ಅತ್ತದರಿ, ಇತ್ತಮಲಿ
ಪ್ರೇಮಸಿಂಧು ಪರಬಂಧು ಮಲ್ಲೇಶ"

(ಪ್ರೇಮಾಂಜಲಿ ಪ್ರೊ. ಕೆ.ಆರ್.ಪ್ರೇಮಲೀಲ, ಪುಟಸಂಖ್ಯೆ – ೧೮)

ಈ ಮೇಲಿನ ವಚನ ಆಧುನಿಕ ಸಮಾಜದಲ್ಲಿ ಮಹಿಳೆಯರ ದಿನನಿತ್ಯ ಎದುರಿಸುತ್ತಿರುವ ಅನಂತ ಕಷ್ಟಕೋಟಲೆಗಳನ್ನು, ಸಮಸ್ಯೆಗಳನ್ನು ತೊಂದರೆಗಳನ್ನು ನಮ್ಮ ಕಣ್ಮುಂದೆ ತಂದು ನಿಲ್ಲಿಸುತ್ತದೆ. ಅಧಿಕಾರಶಾಹಿಗಳು ದುಡಿಯುವ ತಮ್ಮ ಕೈಕೆಳಗಿನ ನೌಕರ ವರ್ಗದವರನ್ನು ಆಡಳಿತ ಸಿಬ್ಬಂದಿಗಳನ್ನು ತಮ್ಮ ಗುಲಾಮರಂತೆ, ಸೇವಕರಂತೆ ನಡೆಸಿಕೊಳ್ಳುತ್ತಿದ್ದಾರೆ. ನಾನು ಎಲ್ಲರಿಗಿಂತ ದೊಡ್ಡವನು. ನಾನು ಹೇಳಿದ್ದೇ ಸತ್ಯ. ಎಲ್ಲರೂ ನಾ ಹೇಳಿದಂತೆ ಕೇಳಬೇಕು ಎಂಬ ಅಹಂಕಾರ ಹೊಂದಿರುತ್ತಾರೆ. ಮಹಿಳೆಯ ಸ್ಥಿತಿಗತಿಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಈ ವಚನ ತಿಳಿಸಿಕೊಡುತ್ತದೆ. ಏಕೆಂದರೆ ಆಧುನಿಕ ಸಮಾಜದಲ್ಲಿ ಬದಲಾದ ಸನ್ನಿವೇಶದಲ್ಲಿ ಮಹಿಳೆಯರೂ ಸಹ ಉದ್ಯೋಗಶೀಲರಾಗಿ ದುಡಿಯಬೇಕಾದ ಪರಿಸ್ಥಿತಿ ಎದುರಾಗದೆ ಕೌಟುಂಬಿಕ ನಿರ್ವಹಣೆ, ಬೆಲೆ ಏರಿಕೆ, ಆಧುನೀಕರಣ, ನಗರೀಕರಣ ಹಾಗೂ ಕೈಗಾರೀಕರಣ ಪ್ರಭಾವದಿಂದಾಗಿ ಮನೆಯ ಗೃಹಿಣಿಯು ದುಡಿಯಬೇಕಾದ ಸಂದರ್ಭಬಂದಿದೆ. ಇಂತಹ ಕ್ಲಿಷ್ಟ ಸನ್ನಿವೇಶದಲ್ಲಿ ಮಹಿಳೆಯರು ಸಹಜವಾಗಿಯೇ ಹಲವಾರು ತೊಂದರೆಗಳಿಗೆ, ಸಮಸ್ಯೆಗಳಿಗೆ, ನೋವುಗಳಿಗೆ ಒಳಗಾಗಬೇಕಾದ ಪರಿಸ್ಥಿತಿ ಬಂದಿದೆ. ಆದ್ದರಿಂದ ಇಂದಿನ ಮಹಿಳೆಯರು ಮನೆಯಲ್ಲಿ ಗೃಹಿಣಿಯಾಗಿ, ಗಂಡನಿಗೆ ಹೆಂಡತಿಯಾಗಿ ಮಕ್ಕಳಿಗೆ ತಾಯಿಯಾಗಿ ನಿರಂತವಾಗಿ ದುಡಿದಿದ್ದೂ ಅಲ್ಲದೆ ಆಧುನಿಕ ಸಮಾಜದಲ್ಲಿ ಮಹಿಳೆಯರು ಪುರುಷರ ದಬ್ಬಾಳಿಕೆ, ದೌರ್ಜನ್ಯಕ್ಕೆ ಬಲಿಯಾಗಿ ಕತ್ತರಿಯ ಬಾಯಲ್ಲಿ ಅಡಿಕೆ ಸಿಕ್ಕಿಹಾಕಿಕೊಂಡಂತೆ ಕ್ಷಣಕ್ಷಣಕ್ಕೂ ನರಳುತ್ತಿದ್ದಾರೆ. ಆದ್ದರಿಂದ ಅವರ ಬದುಕು, ಜೀವನ 'ಅತ್ತದರಿ, ಇತ್ತಮಲಿ' ಎಂಬಂತೆ. ತುಂಬಾ ಅತಂತ್ರ ಸ್ಥಿತಿಯಲ್ಲಿದ್ದಾರೆ ಎಂಬ ಕರಾಳ ಮುಖವನ್ನು ಈ ವಚನ ಅನಾವರಣಗೊಳಿಸಿದೆ.

"ಹೆಣ್ಣು ಮಗು ಜನನಕೆ ಗಂಡು ಹೊಣೆಯಾದರೂ
ಹೆಣ್ಣು ಭ್ರೂಣಹತ್ಯೆಗೆ ಅನುಮೋದನೆ ನೀಡುವರು
ಫಲಾನುಭವಿ ಪುರುಷರು ಬದಲಾಗದ ಹೊರತು
ಮಹಿಳಾ ದಿನಾಚರಣೆಗಳಿಗೆ ಏನಾದರೂ ಅರ್ಥವಿದೆಯೋ
ಪ್ರೇಮಸಿಂಧು, ಪರಮಬಂಧು ಮಲ್ಲೇಶ?"

(ಪ್ರೇಮಾಂಜಲಿ ಪ್ರೊ. ಕೆ.ಆರ್.ಪ್ರೇಮಲೀಲ, ಪುಟಸಂಖ್ಯೆ – ೧೮)

ಇತ್ತೀಚೆಗೆ ಆಧುನಿಕ ಸಮಾಜದಲ್ಲಿ ಹೆಣ್ಣು ಭ್ರೂಣಹತ್ಯೆ ಪ್ರಕರಣಗಳು ಹೆಚ್ಚಾಗುವುದಕ್ಕೆ ಪುರುಷರೇ ಪ್ರಮುಖ ಕಾರಣಕರ್ತರಾಗಿದ್ದಾರೆ ಎಂಬ ಸತ್ಯವನ್ನು ಈ ವಚನ ಬಯಲು ಮಾಡುತ್ತದೆ. ಏಕೆಂದರೆ ಹೆಣ್ಣು ಭ್ರೂಣಹತ್ಯೆ ಮಾಡಿಸುವ ಮುನ್ನ ತಂದೆಯ ಒಪ್ಪಿಗೆ ಮತ್ತು ಅನುಮತಿ ಬಹಳ ಮುಖ್ಯವಾಗಿರುತ್ತದೆ. ತಂದೆ ಅನುಮತಿ ನೀಡಿದರೆ ಮಾತ್ರ ಈ ಕಾರ್ಯ ಸಾಧಿತವಾಗುತ್ತದೆ. ಆದ್ದರಿಂದ ಇಂತಹ ತಂದೆಯವರ ಮನಸ್ಸು ಬದಲಾಗದೇ ಹೊರತು ನಾವು ಎಷ್ಟು ಮಹಿಳಾ ಮತ್ತು ಮಕ್ಕಳ ದಿನಾಚರಣೆಯನ್ನು ನಡೆಸಿದರೂ ಯಾವುದೇ ಪ್ರಯೋಜನವಿಲ್ಲ. ಪೋಷಕರ ಮನಸ್ಸು ಪರಿವರ್ತನೆಯಾದರೆ ಮಾತ್ರ ಹೆಣ್ಣು ಭ್ರೂಣಹತ್ಯೆಯಂತಹ ಸಮಾಜದ್ರೋಹಿ ಕೃತ್ಯಗಳನ್ನು ನಿಗ್ರಹಿಸಬಹುದು ಎಂಬುದು ಪ್ರೇಮಲೀಲಾರವರ ಅಭಿಪ್ರಾಯವಾಗಿದೆ.

"ಉಳ್ಳವರು ಹಣಕೊಟ್ಟು ಸನ್ಮಾನ ಪಡೆವರಯ್ಯ"
ಉಳ್ಳವರು ಹಣಕೊಟ್ಟು ಪ್ರಶಸ್ತಿ ಪಡೆವರಯ್ಯ
ಉಳ್ಳವಳಾದರೂ ನಾನು ಹಣಕೊಟ್ಟು
ನೆಮ್ಮದಿ ನಿದ್ದೆ ಕಳೆದುಕೊಳ್ಳಲು ಸಿದ್ಧವಿಲ್ಲವಯ್ಯ
ನಿನ್ನನ್ನು ವಂಚಿಸಲು ಸಾಧ್ಯವಿಲ್ಲವಯ್ಯ
ಪ್ರೇಮಸಿಂಧು, ಪರಮಬಂಧು ಮಲ್ಲೇಶ?"

(ಪ್ರೇಮಾಂಜಲಿ ಪ್ರೊ. ಕೆ.ಆರ್.ಪ್ರೇಮಲೀಲ, ಪುಟಸಂಖ್ಯೆ – ೧೮)

ಆಧುನಿಕ ಸಮಾಜದಲ್ಲಿ ಕೆಲವು ಶ್ರೀಮಂತರೆನಿಸಿಕೊಂಡರು, ಉಳ್ಳವರೆನಿಸಿಕೊಂಡರು ಹಾಗೂ ಸಮಾಜದಲ್ಲಿ ಗಣ್ಯರೆನಿಸಿಕೊಂಡವರು, ರಾಜಕಾರಣಿಗಳು, ದೊಡ್ಡ ದೊಡ್ಡ ಅಧಿಕಾರಿಗಳು ತಮ್ಮ ಹಣವನ್ನು ಕೊಟ್ಟು ಸನ್ಮಾನ ಮಾಡಿಸಿಕೊಳ್ಳುವುದು ಇತ್ತೀಚಿನ ದಿನಗಳಲ್ಲಿ ತೀರಾ ಸಾಮಾನ್ಯವಾದ ಸಂಗತಿಯಾಗಿದೆ. ಅಷ್ಟೇ ಅಲ್ಲದೆ ಕೆಲವು ಪ್ರತಿಷ್ಠಿತ ಪ್ರಶಸ್ತಿಗಳನ್ನು ಹಣದಿಂದ ಕೊಂಡುಕೊಳ್ಳುವವರೂ ಇದ್ದಾರೆ. ಇದು ತುಂಬಾ ಹಾಸ್ಯಸ್ಪದವಾದ ಸಂಗತಿಯಾಗಿದೆ. ಆದರೆ ಯಾವುದೇ ವ್ಯಕ್ತಿ ಸನ್ಮಾನಗಳನ್ನು, ಪ್ರಶಸ್ತಿಗಳನ್ನು ಹಣಕೊಟ್ಟು ಕೊಂಡು ಸಾಮಾನ್ಯ ಜನರನ್ನು ವಂಚಿಸಬಹುದು. ಆದರೆ ಭಗವಂತನನ್ನು ವಂಚಿಸಲು ಯಾರಿಂದಲೂ ಸಾಧ್ಯವಿಲ್ಲ ಎಂಬುದನ್ನು ಈ ವಚನ ಪ್ರತಿಪಾದಿಸುತ್ತದೆ. ಅಲ್ಲದೆ ಹೀಗೆ ವಾಮಮಾರ್ಗದ ಮೂಲಕ ಪ್ರಶಸ್ತಿಗಳನ್ನು, ಸನ್ಮಾನಗಳನ್ನು ಪಡೆದುಕೊಂಡರೂ ಅದರಿಂದ ಯಾವುದೇ ಪ್ರಯೋಜನವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಇಂತಹ ಅರ್ಥಹೀನ ಕಾರ್ಯಕ್ರಮಗಳಿಗೆ ಕಡಿವಾಣ ಹಾಕಬೇಕು. ಇವು ಸಮಾಜದ ಶಾಂತಿಯನ್ನು ಕದಡುತ್ತವೆ ಎಂಬ ಕಳವಳ ವ್ಯಕ್ತವಾಗಿದೆ.

ಮಹಿಳೆಯರು ಹೊರಗೆ ದುಡಿದರೆ ಮಾತ್ರ ದುಡಿಮೆಯ
ಮನೆಯೊಳಗೆ ದುಡಿವ ಮಹಿಳೆ, ಹೇಗೆ ಕಡಿಮೆ
ಬತ್ತಿ ತಾನುರಿದು ಬೆಳಕ ನೀಡುವ ಪರಿ – ಈ ನಾರಿ
ನರನೆ, ಇದನರಿತು ಗೌರವಿಸು, ಎನುತಿಹನು
ಪ್ರೇಮಸಿಂಧು ಪ್ರೇಮಬಂಧು ಮಲ

(ಪ್ರೇಮಾಂಜಲಿ ಪ್ರೊ. ಕೆ.ಆರ್.ಪ್ರೇಮಲೀಲ, ಪುಟಸಂಖ್ಯೆ – ೨೫)

ಎಲೆ ಮರೆಯ ಕಾಯಿಯಂತೆ ಮೋಡದ ಮರೆಯಲ್ಲಿರುವ ಸೂರ್ಯನಂತೆ ಪ್ರತಿನಿತ್ಯ ನಿರಂತರವಾಗಿ ಅವಿಶ್ರಾಂತಿಯಿಂದ ಮನೆಗಳಲ್ಲಿ ದುಡಿಯುತ್ತಿರುವ ಲಕ್ಷಾಂತರ ಗೃಹಿಣಿಯರ ಸಮಸ್ಯೆಗಳು, ತೊಂದರೆಗಳ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತದೆ. ಆಧುನಿಕ ಜಗತ್ತಿನಲ್ಲಿ ಒಬ್ಬರ ದುಡಿಮೆಯಿಂದ ಜೀವನ ನಿರ್ವಹಣೆ ಕಷ್ಟಸಾಧ್ಯ. ಆದ್ದರಿಂದ ಅನೇಕ ಮಹಿಳೆಯರು ಮನೆಯನ್ನು ತೊರೆದು ಬಾಹ್ಯಜಗತ್ತಿನಲ್ಲಿ ದುಡಿಯುತ್ತಿದ್ದಾರೆ. ಆದರೆ ಪ್ರತಿನಿತ್ಯವು ಕಾಯಕವೇ ಕೈಲಾಸ ಎಂಬಂತೆ ತನ್ನ ಕುಟುಂಬದ ಸದಸ್ಯರೆಲ್ಲರ ಅಭಿವೃದ್ಧಿಗಾಗಿ, ಏಳಿಗೆಗಾಗಿ ದುಡಿಯುತ್ತಿರುವ ಸಾಮಾನ್ಯ ಮಹಿಳೆಯರ ಸಮಸ್ಯೆಗಳನ್ನಂತೂ ಕೇಳುವವರೇ ಇಲ್ಲದಂತಾಗಿದೆ. ಏಕೆಂದರೆ ಸರ್ಕಾರಿ ಕಛೇರಿಗಳಲ್ಲಿ ಸಂಘಸಂಸ್ಥೆಗಳಲ್ಲಿ ದುಡಿಯುತ್ತಿರುವ ಮಹಿಳೆಯರಿಗೆ ಸಿಕ್ಕಷ್ಟು ಗೌರವ–ಸ್ಥಾನಮಾನಗಳು ಗೃಹಿಣಿಯರಿಗೆ ದೊರೆಯದೇ ಹೋಗಿರುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಆದ್ದರಿಂದ ಹೊರಗಡೆ ದುಡಿದರೆ ಮಾತ್ರ ದುಡಿಮೆಯೇ, ಮನೆಯೊಳಗೆ ದುಡಿಯುವ ಮಹಿಳೆ. ಹೇಗೆ ಕಡಿಮೆಯೆಂದು ಪ್ರೇಮಲೀಲಾ ಅವರು ಪ್ರಶ್ನಿಸುತ್ತಾರೆ. ಆದ್ದರಿಂದ ಹೊರಗೆ ದುಡಿವ ದುಡಿಮೆಗಿಂತ ಮನೆಯ ಒಳಗೆ ದುಡಿಯುವ ದುಡಿಮೆಯೇ ಶ್ರೇಷ್ಠವಾದುದು ಎಂಬುದು ವಚನಕಾರ್ತಿಯ ಅಭಿಪ್ರಾಯವಾಗಿದೆ. ಅವರಿಗೂ ಬೇರೆಯವರಂತೆ ಉತ್ತಮ ಗೌರವ, ಸ್ಥಾನಮಾನಗಳು ಆದರಗಳು ದೊರೆಯಬೇಕೆಂಬುದು ಅವರ ಅಭಿಪ್ರಾಯವಾಗಿದೆ. ಏಕೆಂದರೆ ಮನೆಯಲ್ಲಿ ಬತ್ತಿ ನಾನುರಿದು ಬೆಳಕ ನೀಡುವ ಪರಿ – ಈ ನಾರಿಯ ಕೆಲಸಕಾರ್ಯಗಳನ್ನು ಅರ್ಥಮಾಡಿಕೊಂಡು ಸಮಾಜ ಮನ್ನಣೆ ನೀಡಬೇಕೆಂದು ಆಗ್ರಹಿಸಿದ್ದಾರೆ. ಕೆಲಸದಲ್ಲಿ ಯಾವುದೂ ಮೇಲು ಯಾವುದೂ ಕೀಳಲ್ಲ ಎಂಬುದು ಇಂಗಿತವಾಗಿದೆ. ಅಲ್ಲದೆ ಪ್ರತಿನಿತ್ಯ ಗೃಹಿಣಿಯು ತನ್ನ ಮನೆಯಲ್ಲಿ ಎದುರಿಸುತ್ತವೆ. ನೋವುಗಳು, ತೊಂದರೆಗಳು, ಸಮಸ್ಯೆಗಳ ಕಡೆಗೆ ಪ್ರವಚನಕಾರರು ತಮ್ಮ ಗಮನವನ್ನು ಸೆಳೆದಿದ್ದಾರೆ.

"ಸೀಮೆ ಎಣ್ಣೆ ಸ್ಟೌವ್ ಸಿಡಿದು ಗೃಹಿಣಿ ಸಾವು
ಕಾಲುಜಾರಿ ನಾಲೆಗೆ ಬಿದ್ದು ತರುಣಿ ಸಾವು

ಹೊಟ್ಟೆನೋವು ತಾಳಲಾರದೆ ಆತ್ಮಹತ್ಯೆ' ಮಹಿಳೆ ಸಾವು
ಎಲೈ ಮೃತ್ಯು ದೇವತೆಯೇ, ಹೊಸದಾಗಿ ಮದುವೆಯಾದ
ತರುಣಿಯರ ಮೇಲೆ ಏಕೆ ನಿನ್ನ ಕರಾಳಹಸ್ತ?
ಅಥವಾ ಇದರ ಹಿಂದೆ ಇರುವುದೇ ಯಾವುದಾದರೂ ಪೈಶಾಚಿ ಕೃತ್ಯ?
ಇದಕೆ, ನೀನಾದರೂ ಎತ್ತರಿಸುವೆಯಾ
ಪ್ರೇಮಸಿಂಧು ಪರಮಬಂಧು ಮಲ್ಲೇಶ?"

(ಪ್ರೇಮಾಂಜಲಿ ಪ್ರೊ. ಕೆ.ಆರ್.ಪ್ರೇಮಲೀಲ, ಪುಟಸಂಖ್ಯೆ – ೫೩)

ಆಧುನಿಕ ಸಮಾಜದಲ್ಲಿ ಮಹಿಳೆಯರು ಒಂದಲ್ಲಾ ಒಂದು ರೀತಿಯ ದಬ್ಬಾಳಿಕೆ, ದೌರ್ಜನ್ಯಗಳಿಗೆ ಸಿಲುಕಿ ಪ್ರತಿನಿತ್ಯ ಮರಣಹೊಂದುತ್ತಿರುವುದು ತೀರಾ ಸಾಮಾನ್ಯವಾದ ಸಂಗತಿಯಾಗಿದೆ. ಇಂತಹ ಸಾಮಾನ್ಯ ಸಮಸ್ಯೆಗಳಿಗೆ ನಿಲುಕಿ ಅನೇಕ ಮಹಿಳೆಯರು ಮೃತಪಟ್ಟಿದ್ದಾರೆ. ಇದು ವಚನಕಾರ್ತಿಯರಾದ ಪ್ರೊ. ಕೆ.ಆರ್.ಪ್ರೇಮಲೀಲಾ ಅವರನ್ನು ನಿದ್ದೆಗೆಡಿಸಿ ಅವರನ್ನು ಚಿಂತಾಕ್ರಾಂತರನ್ನಾಗಿ ಮಾಡಿದೆ. ಅನೇಕ ಮಹಿಳೆಯರು ಜೀವನದಲ್ಲಿ ಜುಗುಪ್ಸೆಯಿಂದ ವಿಷ ಸೇವಿಸಿ ಸಾಯುತ್ತಿದ್ದಾರೆ. ಇನ್ನು ಕೆಲವರು ಮದುವೆಯಾದ ಒಂದೆರಡು ತಿಂಗಳುಗಳಷ್ಟೇ ಮೃತಪಟ್ಟಿದ್ದಾರೆ. ಇನ್ನು ಕೆಲವರು ಮದುವೆಯ ದಿಬ್ಬಣಕ್ಕೆ ಹೋಗುವ ದಾರಿಯ ಮಧ್ಯದಲ್ಲೆ ಮೃತ್ಯುದೇವತೆಗೆ ಬಲಿಯಾಗುತ್ತಾರೆ. ಇದರಿಂದ ನೊಂದ ಪ್ರೇಮಲೀಲಾರವರು ದೇವತೆಯನ್ನೆ ಪ್ರಶ್ನೆಮಾಡಿದ್ದಾರೆ. ನವ ತರುಣ–ತರುಣಿಯರ ಮೇಲೆ ದಯವಿಟ್ಟು ನಿನ್ನ ಕರಾಳ ಹಸ್ತವನ್ನು ಚಾಚಬೇಡ. ಅವರ ಮೇಲೆ ಪ್ರೀತಿ ತೋರಿಸು, ಕರುಣೆ ತೋರಿ. ಅವರಿಗೆ ಮಂಗಳವನ್ನುಂಟುಮಾಡು ಎಂದು ದೇವರಲ್ಲಿ ಪ್ರಾರ್ಥಿಸಿದ್ದಾರೆ. ಅಲ್ಲದೆ ಇದರ ಹಿಂದೆ ಯಾವುದಾದರೂ ಪೈಶಾಚ ಕೃತ್ಯ ಇರುವುದೇ ಎಂಬ ಅನುಮಾನವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಕಠಿಣವಾದ ಪ್ರಶ್ನೆಗೆ ಸಾಮಾನ್ಯ ಜನರು ಉತ್ತರಿಸಲಾರರು. ಆದ್ದರಿಂದ "ಮೃತ್ಯುದೇವತೆಯೇ ನೀನಾದರೂ ಈ ಪ್ರಶ್ನೆಗೆ ಉತ್ತರನೀಡು" ಎಂಬ ವಾಕ್ಯದ ಹಿನ್ನೆಲೆಯಲ್ಲಿ ವಚನಕಾರ್ತಿಯರಿಗೆ ತರುಣ–ತರುಣಿಯ ಬಗ್ಗೆ ಇರುವ ಪ್ರೀತಿ ಮತ್ತು ಅಭಿಮಾನ ಎಂಥದ್ದು ಎಂಬುದು ನಮಗೆ ಅರ್ಥವಾಗದೇ ಇರಲಾರದು. ಅಲ್ಲದೆ ದೇವರು ಪ್ರತಿಯೊಬ್ಬರಿಗೂ ಮಂಗಳವನ್ನುಂಟುಮಾಡಿ ಅವರ ಬಾಳಿಗೆ ಬೆಳಕಾಗಲಿ ಎಂಬುದೇ ವಚನಕಾರ್ತಿಯರ ಸದಾಶಯವಾಗಿದೆ.

"ಶೋಷಣೆಯ ಬೆಂಕಿಯಲಿ, ಬೆಂದುನೊಂದಿಹರು ಹಲವು
ಅಸಮಾನತೆಯ ಅಗ್ನಿಯಲಿ ನೊಂದಿ ಬೆಂದಿಹರು ಕೆಲವರು

ಸಮತೆ ಸಂಜೀವಿನಿ ಸುರಿಸಿ
ಜೀವಿಗಳನು ಉದ್ಧರಿಸುವವರೇ ದೇವರು
ಇಂತಹ ದೇವಮಾನವರನ್ನು ಕಳಿಸಿಕೊಡು
ಪ್ರೇಮಸಿಂಧು ಪರಮಬಂಧು ಮಲ್ಲೇಶ"

(ಪ್ರೇಮಾಂಜಲಿ ಪ್ರೊ. ಕೆ.ಆರ್.ಪ್ರೇಮಲೀಲ, ಪುಟಸಂಖ್ಯೆ – ೩೯)

ಸಮಾಜದಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ದೌರ್ಜನ್ಯ, ಅಸಮಾನತೆ ಮುಂತಾದ ಅಂಧಕಾರಗಳ ಬಗ್ಗೆ ಈ ವಚನ ಬೆಳಕು ಚಲ್ಲುತ್ತದೆ. ಇಂದಿಗೂ ಲಕ್ಷಾಂತರ ಸ್ತ್ರೀಯರು ದಿನನಿತ್ಯ ಶೋಷಣೆಯ ಬೆಂಕಿಯಲ್ಲಿ ಬೇಯುತ್ತಿದ್ದಾರೆ. ಅಲ್ಲದೆ ಅದೆಷ್ಟೋ ಮಹಿಳೆಯರು ಅನ್ಯಾಯಕ್ಕೆ ಒಳಗಾಗಿದ್ದಾರೆ. ಇಂತಹ ಶೋಷಣೆಗೆ ಒಳಗಾಗಿರುವ ಮಹಿಳೆಯರ ಮೇಲೆ ದಯೆ, ಪ್ರೀತಿ, ಕರುಣೆಯನ್ನು ತೋರಿಸಿ ಅವರ ಬಾಳನ್ನು ಬೆಳಗಬೇಕು ಎಂಬುದು ಪ್ರೇಮಲೀಲಾ ಅವರ ಮನದಾಳದ ಇಂಗಿತವಾಗಿದೆ. ಅಸಮಾನತೆಯ ಬೆಂಕಿಯಲ್ಲಿ ಬೆಂದಿರುವ ಜೀವಗಳಿಗೆ ಸಂಜೀವಿನಿಯನ್ನು ಸುರಿಸಿ ಅವರ ಬದುಕನ್ನು ಬಂಗಾರಗೊಳಿಸಲು ದೇವಮಾನವರನ್ನು ಕಳುಹಿಸು ಎಂದು ಹೇಳುವಲ್ಲಿ ಪ್ರೇಮಲೀಲಾ ಅವರಿಗೆ ಮಹಿಳೆಯ ಬಗ್ಗೆ ಇರುವ ಅನಂತ ಅಭಿಮಾನ, ಕಾಳಜಿ ಎಂಥದ್ದು ಎಂದು ನಮಗೆ ಅರ್ಥವಾಗುತ್ತದೆ. ಸ್ತ್ರೀಕುಲದ ಉದ್ಧಾರಕ್ಕಾಗಿ ಮಿಡಿಯುತ್ತಿರುವ ಅವರ ವ್ಯಕ್ತಿತ್ವ ತುಂಬಾ ಅನುಕರಣಶೀಲವಾದುದು.

"ಸ್ತ್ರೀಯು ಪುತ್ಥಳಿಯಲ್ಲ
ಸ್ತ್ರೀಯು, ಸೂತ್ರದ ಬೊಂಬೆಯಲ್ಲ
ಆತ್ಮೋದ್ಧಾರಕೆ ಲಿಂಗಭೇದವಿಲ್ಲ
ಮನೋಬಲಕೆ ಮಿಗಿಲಾದ ಒಲವಿಲ್ಲ
ಎಂದರುಹಿದ ಅಕ್ಕಮಹಾದೇವಿಯನು ಮತ್ತೆ ಕಳಿಸಿಕೊಡು"
ಪ್ರೇಮಸಿಂಧು ಪರಮಬಂಧು ಮಲ್ಲೇಶ"

(ಪ್ರೇಮಾಂಜಲಿ, ಪ್ರೊ. ಕೆ.ಆರ್.ಪ್ರೇಮಲೀಲಾ, ಪುಟ ಸಂಖ್ಯೆ – ೫೨)

ಸ್ತ್ರೀಯರನ್ನು ಸೂತ್ರದ ಗೊಂಬೆಯಂತೆ ಮನಸ್ಸಿಗೆ ಇಚ್ಛೆ ಬಂದಂತೆ ನಡೆಸಿಕೊಂಡು ಬರುವ ಕೆಲವು ಪುರುಷರು ಸ್ತ್ರೀಯನ್ನು ಕೇವಲ ಭೋಗದ ವಸ್ತುವೆಂದು ಮಕ್ಕಳನ್ನು ಹೆರುವ ಯಂತ್ರಗಳೆಂದು ಭಾವಿಸಿದ್ದಾರೆ. ಅಂಥವರು ಪ್ರೇಮಲೀಲಾರವರ ಆಕ್ರೋಶಕ್ಕೆ ಕಾರಣರಾಗಿದ್ದಾರೆ. ಸ್ತ್ರೀಯರೂ ಪುರುಷರಂತೆ ಸರಿಸಮಾನರು ಅವರಿಗೂ ಇತರರಂತೆ ಸ್ವತಂತ್ರ್ಯವಾಗಿ, ಸಂತೋಷವಾಗಿ ಬಾಳುವ ಅಧಿಕಾರವಿದೆ. ಆದ್ದರಿಂದ ಈ ರೀತಿ

ಹೆಣ್ಣನ್ನು ಕೀಳುದೃಷ್ಟಿಯಿಂದ ನೋಡುವುದು ಸರಿಯಲ್ಲ ಎಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಹೆಣ್ಣು-ಗಂಡು ಎಂಬ ತಾರತಮ್ಯ ಮಾಡಬಾರದು. ಮನೋಬಲದಲ್ಲಿ ಇಬ್ಬರೂ ಒಂದೇ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸ್ತ್ರೀಯರ ಸಮಾನತೆಯನ್ನು ಜಗತ್ತಿಗೆ ಎತ್ತಿಹಿಡಿದಂತಹ ಶಿವಶರಣೆ, ವಚನಕಾರ್ತಿ ಅಕ್ಕಮಹಾದೇವಿಯಂತಹ ಶ್ರೇಷ್ಠ ಮಹಿಳೆಯನ್ನು ಮತ್ತೆ ಕಳುಹಿಸಿ ಕೊಡಬೇಕೆಂದು ಭಗವಂತನಲ್ಲಿ ಪ್ರಾರ್ಥಿಸಿದ್ದಾರೆ. ಇದು ಪ್ರೇಮಲೀಲಾ ಅವರಿಗೆ ಇರುವ ಸಾಮಾಜಿಕ ಕಳಕಳಿಯನ್ನು ಸೂಚಿಸುತ್ತದೆ.

"ದೇಶಭಕ್ತಿಗೀತೆ ಹಾಡಿದರೆ ದೇಶಪ್ರೇಮಿಯೇ?
ಜೈಲಿಗೆ ಹೋಗಿ ಬಂದರೆ, ಕ್ರಾಂತಿಕಾರರೆ?
ವಚನಗಳನು ರಚಿಸಿದರೆ ಶರಣನೆ?
ಹೀಗೆ ಭ್ರಮಿಸಿರುವ ಜನರ ಭ್ರಾಂತಿ ನೀಗಿಸು
ಪ್ರೇಮಸಿಂಧು ಪರಮಬಂಧು ಮಲ್ಲೇಶ"

(ಪ್ರೇಮಾಂಜಲಿ, ಪ್ರೊ. ಕೆ.ಆರ್.ಪ್ರೇಮಲೀಲಾ, ಪುಟ ಸಂಖ್ಯೆ – ೬೧)

ಒಂದೆರಡು ದೇಶಭಕ್ತಿಗಳನ್ನು ಹಾಡಿದ ತಕ್ಷಣ ಆ ವ್ಯಕ್ತಿಯನ್ನು ನಾವು ದೇಶಪ್ರೇಮಿ ಎಂದು ಕರೆಯಲು ಸಾಧ್ಯವಿಲ್ಲ. ನಾನಾರೀತಿಯ ತಪ್ಪುಗಳನ್ನು ಮಾಡಿ ಜೈಲುಶಿಕ್ಷೆಯನ್ನು ಅನುಭವಿಸಿದ ಒಬ್ಬ ಖೈದಿಯನ್ನು ನಾವು ಕ್ರಾಂತಿಕಾರನೆಂದು ಕರೆಯಲು ಸಾಧ್ಯವಿಲ್ಲ. ಹಾಗೆಯೇ ಕೇವಲ ಕಾಲಹರಣಕ್ಕಾಗಿ ಅರ್ಥವಿಲ್ಲದ, ಸತ್ವವಿಲ್ಲದ ಒಂದೆರಡು ವಚನಗಳನ್ನು ರಚಿಸಿದ ವ್ಯಕ್ತಿಯು ಎಂದಿಗೂ ಶಿವಶರಣರಾಗುವುದಿಲ್ಲ. ಏಕೆಂದರೆ ಇವರೆಲ್ಲರು ಢಾಂಭಿಕ ವ್ಯಕ್ತಿಗಳಾಗಿದ್ದಾರೆ. ಜನರನ್ನು ಮೋಸಗೊಳಿಸುವುದಕ್ಕೋಸ್ಕರ ಕೆಲವು ವೇಳೆ ಇಂತಹ ವೇಷಗಳನ್ನು ಹಾಕಿಕೊಂಡಿರುತ್ತಾರೆ. ಆದ್ದರಿಂದ ಇಂತಹ ದುಷ್ಟರನ್ನು ಸಾಮಾನ್ಯ ಜನರು ದೇಶಭಕ್ತರು, ಕ್ರಾಂತಿಕಾರರು, ಶಿವಶರಣೆಯರು ಎಂದು ನಂಬಿ ಮೋಸಹೋಗಬಾರದೆಂಬ ಎಚ್ಚರಿಕೆಯನ್ನು ನೀಡಿದ್ದಾರೆ. ಇಂತಹ ವ್ಯಕ್ತಿಗಳನ್ನು ಶ್ರೇಷ್ಠರೆಂಬ ಭಾವಿಸಿರುವ ಸಾಮಾನ್ಯಜನರ ಭ್ರಾಂತಿಯನ್ನು ಹೋಗಲಾಡಿಸು ಎಂದು ದೇವರಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ. ಈ ಮೂಲಕ ಸಾಮಾನ್ಯ ಜನರಲ್ಲಿ ವೈಜ್ಞಾನಿಕ, ವೈಚಾರಿಕ, ಮನೋಭಾವನೆಗಳನ್ನು ಸ್ಥಾಪಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇದು ತುಂಬಿ ಪ್ರಶಂಸನೀಯವಾದ ಅಂಶವಾಗಿದೆ.

"ದುಡಿಯದೆ ಶ್ರೀಮಂತನಾಗುವ ಆಸೆ
ಬರೆಯದೆ ಲೇಖಕನಾಗುವಾಸೆ

ಓದದೆ ಜಾಣನಾಗುವ ಆಸೆ
ಪರಿಶ್ರಮವಿಲ್ಲದೆ ಪ್ರಶಸ್ತಿ ಪಡೆಯುವ ಆಸೆ
ಸಾಲಮಾಡಿ, ತುಪ್ಪತಿನ್ನುವ ಪ್ರವೃತ್ತಿಯ ಜನರು
ಹೆಚ್ಚುತಿಹರು ಪ್ರೇಮಸಿಂಧು ಪರಮಬಂಧು"

(ಪ್ರೇಮಾಂಜಲಿ, ಪ್ರೊ. ಕೆ.ಆರ್.ಪ್ರೇಮಲೀಲಾ, ಪುಟ ಸಂಖ್ಯೆ - ೬೨)

ಲೋಕದಲ್ಲಿ ಬಗೆಬಗೆಯ ಮನಸ್ಸು ಪ್ರವೃತ್ತಿ, ಮನೋಭಾವ ಇರುವ ಜನರನ್ನು ನಾವು ಕಾಣಬಹುದು. "ಲೋಕೋಭಿನ್ನರುಚಿ" ಎಂಬಂತೆ ಬಗೆ-ಬಗೆಯ ಗುಣಸ್ವಭಾವ ಇರುವ ವ್ಯಕ್ತಿಗಳನ್ನು ನಾವು ಜಗತ್ತಿನಲ್ಲಿ ಕಾಣಬಹುದಾಗಿದೆ. ಅಂತಹ ಕೆಟ್ಟ ಮನೋಭಾವನೆ ಇರುವ ವ್ಯಕ್ತಿಗಳನ್ನು ಈ ವಚನ ಖಂಡಿಸುತ್ತದೆ. ಅಲ್ಲದೆ ಇಂತಹ ಮನೋಭಾವನೆ ಸರಿಯಾದುದಲ್ಲ. ಇದು ಸಮಾಜಬಾಹಿರವಾದ ಸಂಗತಿಯೆಂದು ತಿಳಿಸುತ್ತದೆ. ಇಂದಿನ ಆಧುನಿಕ ಸಮಾಜದಲ್ಲಿ ಕೆಲವು ಯುವಕ-ಯುವತಿಯರು ಇಂತಹ ದುರಾಸೆಗಳನ್ನು, ದುರಾಲೋಚನೆಗಳನ್ನು ಹೊಂದಿದವರಾಗಿದ್ದಾರೆ. ಇದು ತುಂಬ ಕಳವಳಕಾರಿಯಾದ ಸಂಗತಿಯಾಗಿದೆ. ಏಕೆಂದರೆ ಕಷ್ಟಪಟ್ಟು ದುಡಿಯುವ ವ್ಯಕ್ತಿ ಮಾತ್ರ ಶ್ರೀಮಂತನಾಗಬಲ್ಲ. ಆಳವಾದ ಅಧ್ಯಯನದಿಂದ ಸತತ ಪರಿಶ್ರಮದ ಬರವಣಿಗೆಯ ಮೂಲಕ ಮಾತ್ರ ಒಬ್ಬ ವ್ಯಕ್ತಿ ಉತ್ತಮ ಲೇಖಕನಾಗಬಹುದು ಹಾಗೂ ಸತತ ಪರಿಶ್ರಮದಿಂದ ಮಾತ್ರ ಸಮಾಜದಲ್ಲಿ ಉತ್ತಮ ಸ್ಥಾನಮಾನಗಳನ್ನು ಗೌರವಗಳನ್ನು ಪಡೆಯಲು ಸಾಧ್ಯವಿದೆ. ಇಂತಹ ಯಾವುದೇ ಶ್ರೇಷ್ಠ ಸಾಧನೆ ಮಾಡದ ವ್ಯಕ್ತಿ ಕೇವಲ ದುರಾಸೆಗಳನ್ನುಟ್ಟುಕೊಳ್ಳುವುದು ತುಂಬ ವಿಪರ್ಯಾಸ ಸಂಗತಿಯಾಗಿದೆ. ಇದು ನಿಜಕ್ಕೂ ಆಶಾದಾಯಕ ಸಂಗತಿಯಲ್ಲ, ಆದ್ದರಿಂದ ಸಮಾಜದ ಜನರು ಪರಿಶ್ರಮಕ್ಕೆ ತಕ್ಕಂತೆ ಪ್ರತಿಫಲವನ್ನು ಬಯಸುವ ಮನೋಭಾವನೆ ಬೆಳೆಸಿಕೊಳ್ಳಬೇಕು. ದುರಾಸೆಯನ್ನು ಜನರು ಕೈಬಿಡಬೇಕೆಂಬ ಕಿವಿಮಾತನ್ನು ವಚನಗಾರ್ತಿಯರು ಹೇಳಿದ್ದಾರೆ. ಅಲ್ಲದೆ ಕಂಡಕಂಡಲ್ಲಿ ಸಾಲಸೋಲ ಮಾಡಿ ಹಬ್ಬದ ಊಟವನ್ನು ಉಂಡು ನಂತರ ಸಾಲ ತೀರಿಸಲಾಗದೇ ಪಶ್ಚಾತ್ತಾಪಪಡುವುದಕ್ಕಿಂತ 'ಹಾಸಿಗೆ ಇದ್ದಷ್ಟು ಕಾಲುಚಾಚು' ಎಂಬ ನೀತಿಯನ್ನು ಅವರ ವಚನ ಬೋಧಿಸುತ್ತದೆ.

"ಸಾಲವನು ಕೊಂಬಾಗ ಹಾಲೋಗರಉಂಡಂತೆ
ಸಾಲಿಗನು ಬಂದು ಎಳೆವಾಗ
ಕಿಬ್ಬದಿಯ ಕೀಲು ಮುರಿದಂತೆ ಸರ್ವಜ್ಞ"

ಎಂಬ ಸರ್ವಜ್ಞನ ವಾಣಿಯನ್ನು ನೆನಪಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ಈ ವಾಕ್ಯವನ್ನು ಅರ್ಥಮಾಡಿಕೊಂಡು ಹಾಗೆಯೇ ನಡೆದರೆ ಬದುಕು ಸುಂದರವಾಗಿರುತ್ತದೆ ಮತ್ತು ಸಂತೋಷವಾಗಿರುತ್ತದೆ ಎಂಬುದು ಪ್ರೇಮಲೀಲಾ ಅವರ ಅಭಿಪ್ರಾಯವಾಗಿದೆ. ಇಲ್ಲದಿದ್ದರೆ 'ಅತಿ ಆಸೆ ಗತಿಗೆಡಿಸಿತು' ಎಂಬ ನಾಣ್ಣುಡಿಯಂತೆ. ವಿಪರೀತವಾಗಿ ಸಾಲಸೋಲಮಾಡಿ ಆ ಸಾಲವನ್ನು ತೀರಿಸಲಾಗದೆ ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬರುತ್ತದೆ ಎಂಬ ಎಚ್ಚರಿಕೆಯನ್ನು ಈ ವಚನ ನೀಡುತ್ತದೆ. 'ಹಂಗಿನ ಅಮೃತಕ್ಕಿಂತ ಸ್ವಂತ ವಿಷಲೇಸು' ಎಂಬಂತೆ ಮನುಷ್ಯ ಸ್ವಾಭಿಮಾನಿಯಾಗಿ, ಸ್ವಾವಲಂಬಿಯಾಗಿ ಬದುಕಬೇಕೆಂಬುದೇ ಈ ವಚನದ ಮುಖ್ಯ ಆಶಯವಾಗಿದೆ.

"ಹುಟ್ಟಿದ ಗಿಡಗಳೆಲ್ಲ ಉಪಯುಕ್ತ ಉಪಯುಕ್ತ ಮೂಲಿಕಗಳಲ್ಲ
ಜನಿಸಿದ ಜನರೆಲ್ಲ ಮಾನವರಲ್ಲ
ರೋಗಕೆ ನೆರವಾದರೆ ಮೂಲಿಕೆ
ಮಾನವೀಯತೆ ಇದ್ದರೆ ಮಾನವ – ಎನುತಿಹನು
ಪ್ರೇಮಸಿಂಧು ಪರಮಬಂಧು ಮಲ್ಲೇಶ"

(ಪ್ರೇಮಾಂಜಲಿ, ಪ್ರೊ. ಕೆ.ಆರ್.ಪ್ರೇಮಲೀಲಾ, ಪುಟ ಸಂಖ್ಯೆ – ೬೪)

ಕಾಡಿನಲ್ಲಿ ಅಸಂಖ್ಯಾತ ಗಿಡ–ಮರಗಳು ಹುಟ್ಟಿ ಬೆಳೆದಿರುತ್ತವೆ. ಆದರೆ ಅದರಲ್ಲಿ ಕೆಲವು ಗಿಡಗಳು ಮಾತ್ರ ಔಷಧಿಯ ಗುಣಗಳನ್ನು ಹೊಂದಿರುತ್ತವೆ. ಇನ್ನುಳಿದ ಗಿಡಗಳು ಪ್ರಯೋಜನಕ್ಕೆ ಬರುವುದಿಲ್ಲ. ಏಕೆಂದರೆ ಅವುಗಳಲ್ಲಿ ರೋಗನಿರೋಧಕ ಔಷಧಿಗುಣಗಳು ಇರುವುದಿಲ್ಲ. ಅದರಿಂದ ಅವುಗಳಿಗೆ ಯಾವ ಬೆಲೆಯೂ ಇರುವುದಿಲ್ಲ. ಅವುಗಳು ತಾವಾಗಿಯೇ ಹುಟ್ಟಿ – ತಾವಾಗಿಯೇ ಸತ್ತುಹೋಗುತ್ತದೆ. ಇದರಿಂದ ಸಮಾಜಕ್ಕಾಗಲಿ, ಜನರಿಗಾಗಲಿ ಯಾವ ಪ್ರಯೋಜನವೂ ಆಗುವುದಿಲ್ಲ. ಇಂತಹ ಗಿಡಗಳು ವ್ಯರ್ಥಗಿಡಗಳೆನಿಸುತ್ತದೆ. ಅದೇ ರೀತಿಯಲ್ಲಿಯೇ ಹುಟ್ಟಿದ ಮಕ್ಕಳೆಲ್ಲಾ ಶ್ರೇಷ್ಠ ಮಾನವರಾಗುವುದಕ್ಕೆ ಸಾಧ್ಯವಿಲ್ಲ. ಒಂದೇ ತಾಯಿಯ ಮಕ್ಕಳಾಗಿದ್ದರೂ ಅವರಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಅವರಲ್ಲಿ ಕೆಲವರು ಒಳ್ಳೆಯವರಾಗಿರುತ್ತಾರೆ ಮತ್ತೆ ಕೆಲವರು ಕೆಟ್ಟವರಾಗಿರುತ್ತಾರೆ. ಹುಟ್ಟಿದ ಮಕ್ಕಳೆಲ್ಲರೂ ಮಹಾಪುರುಷರಾಗಲು ಸಾಧ್ಯವಿಲ್ಲ. ಗಣ್ಯರೆನಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಸತ್ಯವನ್ನು ತಿಳಿಸಿಕೊಡುತ್ತದೆ. ಇದು ಸಾಮಾನ್ಯ ಸಂಗತಿ ಎಂದು ಭಾವಿಸಿದರೂ ತುಂಬ ವ್ಯಾಪಕವಾದ ಅರ್ಥವನ್ನು ಒಳಗೊಂಡಿದೆ. ಕಾಡಿನಲ್ಲಿ ಔಷಧಿಗುಣ ಇಲ್ಲದ ಗಿಡಗಳಿಗೆ ಹೇಗೆ ಬೆಲೆ ಇರುವುದಿಲ್ಲವೋ ಹಾಗೆಯೇ ಮಾನವೀಯತೆ ಇಲ್ಲದ ಮನುಷ್ಯರಿಗೆ ಯಾವುದೇ ಬೆಲೆ ನೆಲೆಯಿಲ್ಲ. ಮನುಷ್ಯನಿಗೆ ಮಾನವೀಯತೆ ಭೂಷಣ. ಅಂತಹ

ಮಾನವೀಯತೆಯ ಅಂಶಗಳನ್ನು ಹೊಂದಿರುವ ವ್ಯಕ್ತಿಗೆ ಮಾತ್ರ ಸಮಾಜದಲ್ಲಿ ಉತ್ತಮ ಗೌರವ, ಸ್ಥಾನಮಾನಗಳು ಸಿಗುತ್ತವೆ ಎಂಬ ಸತ್ಯ ಸಂಗತಿಯನ್ನು ಈ ವಚನ ತಿಳಿಯಪಡಿಸುತ್ತದೆ. ಮಾನವೀಯತೆ ಇಲ್ಲದಿದ್ದ ವ್ಯಕ್ತಿ ಪ್ರಾಣಿಗಳಿಗಿಂತ ಕೀಳು ಎಂಬ ಮನೋಭಾವನೆ ವ್ಯಕ್ತವಾಗಿದೆ. ಆದ್ದರಿಂದ ಮಾನವೀಯತೆ ಇದ್ದ ವ್ಯಕ್ತಿಯನ್ನು ಮಾತ್ರ ಮಾನವ ಎಂದು ಕರೆಯಬಹುದು. ಆ ಮಾನವೀಯತೇ ಇಲ್ಲದಿದ್ದ ವ್ಯಕ್ತಿಗೆ ಮಾನವ ಎಂದು ಕರೆಯಲಾಗದು ಎಂಬ ನಿಷೇಧಾತ್ಮಕ ಭಾವನೆ ವ್ಯಕ್ತವಾಗಿದೆ. ಆದ್ದರಿಂದ ಮಾನವೀಯತೆಯೇ ನಿಜವಾದ ವಿದ್ಯೆ ಎಂಬುದು ಪ್ರೇಮಲೀಲಾ ಅವರ ಚಿಂತನೆಯಾಗಿದೆ. ಮನುಷ್ಯರಲ್ಲಿ ಮಾನವೀಯತೆ ಕಡಿಮೆಯಾಗುತ್ತಿರುವ ಇತ್ತೀಚಿನ ದಿನಗಳಲ್ಲಿ ಈ ವಚನ ಹೆಚ್ಚು ಮಹತ್ವವನ್ನು ಪಡೆದುಕೊಂಡಿದೆ ಎಂದು ಹೇಳಬಹುದು. ಪ್ರೇಮಲೀಲಾ ಅವರು ದೇಶಭಕ್ತಿ ದೇಶಗಳಿಂದ ಮುಕ್ತವಾದ, ಆರೋಗ್ಯವಂತ ಸಮಾಜದ ಸ್ಥಾಪನೆಗೂ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ.

"ಪ್ರೇಮ-ದಯೆ ತಳಹದಿ ಮೇಲೆ
ಜ್ಞಾನ-ವಿಜ್ಞಾನ ಗೋಡೆಯ ಮೇಲೆ ವೈಚಾರಿಕ ಗೋಪುರ ಕಟ್ಟೋಣ
ಇಟ್ಟಿಗೆ ಮರಳು ಸಿಮೆಂಟ್ ಇಲ್ಲದ
ಸುಂದರ ಮಂದಿರ ಕಟ್ಟೋಣ
ಗುಡಿಯಲ್ಲಿ ಭಾರತಾಂಬೆಯನ್ನು ಕೂರಿಸಿ
ಶಾಂತಿಹೂಗಳ ಸಲಿಸೋಣ
'ವಂದೇಮಾತರಂ' ಮಂತ್ರ ಜಪಿಸೋಣ
ಕಾಯಕ ಯಾಗವ ಮಾಡೋಣ
ಶ್ರದ್ಧಾ ದೀಪವ ಬೆಳಗೋಣ
ಸುಂದರ ಸುಭದ್ರ ನಾಡಗುಡಿಯ
ಉದ್ಘಾಟನೆಗೆ ದೇವರನ್ನೇ ಕರೆಯೋಣ, ಬಂದೇ ಬರುವನು?
ಪ್ರೇಮಸಿಂಧು ಪರಮಬಂಧು"

(ಪ್ರೇಮಾಂಜಲಿ, ಪ್ರೊ. ಕೆ.ಆರ್.ಪ್ರೇಮಲೀಲಾ, ಪುಟ ಸಂಖ್ಯೆ - ೬೫)

-ಹೀಗೆ ಪ್ರೇಮಲೀಲಾ ಅವರು ಆಧ್ಯಾತ್ಮಿಕತೆಯ ಸಹಾಯದಿಂದ ಮಾನವ ಜನಾಂಗದ ಉದ್ಧಾರಕ್ಕಾಗಿ ಹಂಬಲಿಸುತ್ತಿದ್ದಾರೆ ಎನ್ನಬಹುದು. ಶ್ರೀಮತಿ ಪ್ರೇಮಲೀಲಾ ಅವರು, ಈ ವಚನ ಸಂಕಲನದಲ್ಲಿ ಸಮಾಜದಲ್ಲಿ ನಡೆಯುವ ಅನ್ಯಾಯ, ಅಕ್ರಮ, ಅನೌಚಿತ್ಯ ವರ್ತನೆಗಳನ್ನು ಕಂಡು ಸಿಡಿಮಿಡಿಗೊಂಡಿದ್ದಾರೆ. ಮೋಸ-ಶೋಷಣೆಯನ್ನು ಕಂಡು ನೊಂದಿದ್ದಾರೆ. ಅಲ್ಲಿಯ ಅಜ್ಞಾನ,

ಅಸಹಾಯಕತೆ, ಮೌಢ್ಯಾಚರಣೆ ನೋಡಿ ಮಮ್ಮಲ ಮರುಗಿದ್ದಾರೆ. ಪುಂಡಪೋಕರಿಗಳು ಮೆರೆಯುವುದನ್ನು ಸಾಧು ಸಜ್ಜನರು ಕೊರಗುವುದನ್ನು ಕಂಡು ಅಚ್ಚರಿಗೊಂಡಿದ್ದಾರೆ. ಇವೆಲ್ಲದಕ್ಕೂ ಪರಿಹಾರವೇನೆಂದು ಚಿಂತಿಸಿ, ಚಿಂತಿಸಿ ವಚನರೂಪದಲ್ಲಿ ಅವರ ಭಾವನೆಗಳಿಗೆ ಇಂಬು ಕೊಟ್ಟಿದ್ದಾರೆ. ಇಲ್ಲಿಯ ವಿಡಂಬನೆಗಳಿಂದ ಓದುಗರನ್ನು ಚಿಂತನೆಗೆ ತೊಡಗಿಸಿದ್ದಾರೆ. ಇವುಗಳು ಒಂದು ಬಗೆಯ ಬಾಹ್ಯಾಲೋಚನೆಗಳಿದ್ದಂತೆ ಎಂದು ಹೇಳಬಹುದಾಗಿದೆ.

ಪ್ರೊ. ಪ್ರೇಮಲೀಲಾ ಅವರಿಗೆ ವಚನ ಪ್ರಕಾರರ ಮೇಲೆ ಹಿಡಿತವಿದೆ. ಅವರ ಇಲ್ಲಿನ ವಚನಗಳಲ್ಲಿ ಪ್ರಾಚೀನ ವಚನಗಳ ಪಡಿನೆರಳನ್ನು ಒಮ್ಮೊಮ್ಮೆ ಕಾಣಬಹುದು. ಪ್ರತಿಧ್ವನಿ ಒಮ್ಮೊಮ್ಮೆ ಕೇಳಬಹುದು. ಆದರೆ ಸ್ವೋಪಜ್ಞತೆ ಸಾಕಷ್ಟಿದೆ ಎಂಬುದು ಮೆಚ್ಚಬೇಕಾದ ಸಂಗತಿ. ಎಷ್ಟೋ ವಚನಗಳು ಆರಂಭದಲ್ಲಿ ಸಾದಾ ಎನಿಸಿದರೂ ಅಂತ್ಯದಲ್ಲೊಂದು ತಿರುವು ತೆಗೆದುಕೊಂಡು, ಅಚ್ಚರಿಗೊಳಿಸುತ್ತವೆ.

ಈ ಸಂಕಲನದ ಅನೇಕ ವಚನಗಳು ಆತ್ಮಾವಲೋಕನದ, ಆತ್ಮನಿವೇದನೆಯ ಫಲಪುಷ್ಪಗಳಾಗಿವೆ. ಕೆಲವು ರಚನೆಗಳಲ್ಲಿ ಸಾಮಾಜಿಕ, ಸಮಕಾಲೀನ ಪ್ರಜ್ಞೆಯಿಂದ ಹಾಸ್ಯ, ವಿಡಂಬನೆಗಳ ರಂಗಿದೆ. ವಿಷಯದಂತೆ ಅಭಿವ್ಯಕ್ತಿಯಲ್ಲೂ ಎಷ್ಟೋ ಕಡೆ ನಾವಿನ್ಯ ಪ್ರಕಟವಾಗಿದೆ. ಹಳೆಯದಕ್ಕೆ ಹೊಸ ರೂಪವನ್ನು ಕೊಟ್ಟಿದ್ದಾರೆ. ಅವರ ವಚನಗಳಲ್ಲಿನ ಅಂತರಂಗ ದರ್ಶನಲ್ಲಿ ಭಾವಪೂರ್ಣತೆಯಿದ್ದರೆ ಸಮಾಜ ನಿರೀಕ್ಷಣೆಯ ಚಿಂತನೆಯಲ್ಲಿ ವೈಚಾರಿಕತೆಯ ಮಿಂಚುಗಳಿವೆ.

# ೬. ಹನ್ನೆರಡನೇ ಶತಮಾನದ ವಚನಕಾರ್ತಿಯರ ಚಿಂತನೆ

## I. ಸ್ತ್ರೀನಿಷ್ಠ ಚಿಂತನೆ:

ಹನ್ನೆರಡನೇ ಶತಮಾನದಲ್ಲಿ ಜಗತ್ತಿಗೆ ಜ್ಯೋತಿ ಸ್ವರೂಪವಾಗಿ ಬಸವಣ್ಣನವರು ಬೆಳಗಿದರು. ಅಜ್ಞಾನದ ಅಂಧಕಾರತೆಯಿಂದಾಗಿ ಮೌಢ್ಯ, ಸಂಪ್ರದಾಯಗಳು ಸಮಾಜದಲ್ಲಿ ಆಳವಾಗಿ ಕತ್ತಲೆಯ ಪಾಳೆಯಕೆ ರವಿಬೀಜವಾದಂತೆ ಬೇರೂರಿದ್ದವು. ಕಗ್ಗತ್ತಲೆಯ ಕಾರ್ಮೋಡ ಕವಿದಿದ್ದ ಸಮಾಜಕ್ಕೆ ದಾರಿದೀಪವಾದರು ಬಸವಣ್ಣನವರು, ಕುಲ–ಗೋತ್ರ, ವರ್ಣ, ಆಶ್ರಮಗಳಿಂದಾಗಿ ಮಾನವ ಸಮಾಜ ಒಡೆದು ಹೋಳಾಗಿತ್ತು. ಮೇಲು, ಕೀಳು, ಸ್ಪೃಶ್ಯ–ಅಸ್ಪೃಶ್ಯರೆಂಬ ಅರಿವು ಆಳವಾಗಿತ್ತು.

ಸ್ತ್ರೀಯರನ್ನು ಸಮಾಜ ಕಡೆಗಣಿಸಿತ್ತು. ಅವರಿಗೆ ಯಾವುದೇ ವಿಧವಾದ ಸ್ವಾತಂತ್ರ್ಯವಿರಲಿಲ್ಲ 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಉಕ್ತಿಗೆ ಹೆಚ್ಚು ಒತ್ತು ಕೊಡಲಾಗಿತ್ತು. ಸ್ತ್ರೀಯರನ್ನು ಶೂದ್ರರೆಂದೇ ಪರಿಗಣಿಸಲಾಗಿತ್ತು. ಅಲ್ಲದೆ ಆಕೆ ಯಾವುದೇ ರೀತಿಯ ಧಾರ್ಮಿಕ ವಿಧಿವಿಧಾನಗಳನ್ನು ಅನುಸರಿಸುವಂತಿರಲಿಲ್ಲ. 'ಅಕ್ಕನಿಗಿಲ್ಲದ ಜನಿವಾರಧಾರಣೆ ನನಗೇಕೆ? ಎಂದು ಪ್ರತಿಭಟಿಸುವಲ್ಲಿ ಬಸವಣ್ಣ ಬಾಲಕನಿದ್ದಾಗಲೇ ಸ್ತ್ರೀ ವಿಮೋಚನೆಗೆ ಮಹತ್ವ ಕೊಟ್ಟಿದ್ದು ತಿಳಿದುಬರುತ್ತದೆ. ಸ್ತ್ರೀಗೂ ಪುರುಷನ ಹಾಗೆ ಆಸೆ, ಆಕಾಂಕ್ಷೆ ಭಾವನೆಗಳಿವೆ. ಪುರುಷನಷ್ಟೇ ಸ್ತ್ರೀಯು ಸಮರ್ಥಳು ಎಂಬುದನ್ನು ಈ ನಾಡಿಗೆ ತೋರಿಸಿಕೊಟ್ಟಿದ್ದನು.

'ಹೆಣ್ಣು–ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು 'ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಹೇಳುವಲ್ಲಿ ಶರಣರು ಸ್ತ್ರೀಗೆ ಎಂಥ ಸ್ಥಾನವನ್ನು ಕೊಟ್ಟಿದ್ದರು ಎಂದು ತಿಳಿದುಬರುತ್ತದೆ. ಅನುಭವಮಂಟಪದಲ್ಲಿ ಎಲ್ಲ ಶರಣ–ಶರಣೆಯರು ಸೇರಿ ಮುಕ್ತವಾಗಿ ಚರ್ಚಿಸುತ್ತಿದ್ದರು. ಬಸವಣ್ಣನವರು ಆರಂಭಿಸಿದ್ದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಕ್ರಾಂತಿಯ ಕೀರ್ತಿಯು ದೇಶದ ಉದ್ದಗಲಕ್ಕೆ ಹಬ್ಬಿಹರಡಿತ್ತು. ಕಲ್ಯಾಣದ ಕೀರ್ತಿವಾರ್ತೆ ಸೂಜಿಗಲ್ಲಿನಂತೆ ರಾಷ್ಟ್ರದ ನಾನಾಭಾಗಗಳಿಂದ ಶರಣರನ್ನು ಕಲ್ಯಾಣಕ್ಕೆ ಆಕರ್ಷಿಸಿತು. ಹೀಗೆ ಬಂದವರಲ್ಲಿ ಕಾಶ್ಮೀರ ದೇಶದ ಮಾಂಡವ್ಯಪುರದ ಅರಸನ ಮಗಳು ನಿಜದೇವಿ ಒಬ್ಬಳು.

ಕಾಯಕಷ್ಟದಿಂದ ಮಾಡುವುದೇ ಕಾಯಕ, ಹೆಣ್ಣು, ಗಂಡು, ಗುರು, ಭಕ್ತ, ಜಂಗಮ ಯಾರೇ ಇರಲಿ ಎಲ್ಲರೂ ದುಡಿದೇ ಉಣ್ಣಬೇಕೆಂಬುದು ನಿಯಮವಾಗಿತ್ತು. ಶರಣರಿಗೆ ಕಾಯಕವೇ ಕೈಲಾಸ, ಕಾಯಕವೇ ಪೂಜೆ, ಆದ್ದರಿಂದ ಕಾಳವ್ವೆಯು ತನ್ನ ವಚನದಲ್ಲಿ ಭಕ್ತರಾದವರು ಕಾಯಕವನ್ನು ಮಾಡಲೇಬೇಕು ಮತ್ತು ಆ

ಕಾಯಕ ತತ್ವ ಸತ್ಯ, ಶುದ್ಧವಾಗಿರಬೇಕು ಎಂದು ಎಚ್ಚರಿಸುತ್ತಾ ಆಸೆಯೇ ದುಃಖಕ್ಕೆ ಮೂಲ ಎಂದು ಹೇಳುತ್ತಾಳೆ.

'ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ; ಶುದ್ಧಭಕ್ತಿ ಇಲ್ಲದುದು ಕಾಯಕವಲ್ಲ ಆಸೆಯೆಂಬುದು ಭವದ ಬೀಜ ನಿರಾಸೆಯೆಂಬುದು ನಿತ್ಯಮುಕ್ತಿ, ಉರಿಲಿಂಗ ಪೆದ್ದಗಳ ರಸನಲ್ಲಿ ಸದರವಲ್ಲ ಕಾಣವ್ವಾ' ಭಕ್ತನಾದವನು ಹೇಗಿರಬೇಕೆಂಬುದನ್ನು ಹೇಳುತ್ತಾರೆ.

"ತೊಬರದ ಕೊಳ್ಳಿಯಂತೆ ಉರಿವಾತ – ಭಕ್ತನೆ?
ಹುಸಿದು ತಂದು ಮಾಡುವಾತ ಭಕ್ತನೆ?
ಭಕ್ತರ ಕುಲವನ್ನೆತ್ತಿ ನಿಂದಿಸುವಾತ ಭಕ್ತನೆ?
ತನ್ನ ಪ್ರಾಣದ ಮೇಲೆ ಒಂದರೂ ಬರಲಿ, ಇವರ ಬಿಡಬೇಕು
ಬಿಡದಿರಲು ಉರಿಲಿಂಗೆ ಪೆದ್ದಿಗಳರಸನೊಲ್ಲನವ್ವಾ

(ಶರಣ – ಶರಣೆಯರ ಜೀವನ ಚರಿತ್ರೆ, ವಿವಿಧ ಲೇಖಕರು ಪುಟಸಂಖ್ಯೆ – ೮೯)

ಸಮಾಜವನ್ನು ವಿಭಜಿಸುವ ಈ ವರ್ಣಾಶ್ರಮ ಪದ್ಧತಿ ಹನ್ನೆರಡನೇ ಶತಮಾನದಲ್ಲಿ ಉಕ್ಕಿನ ಕೋಟೆಯಂತಿತ್ತು. ಬ್ರಾಹ್ಮಣ ಶ್ರೇಷ್ಠ ಹೊಲೆಯ ಕನಿಷ್ಠ ಎಂಬ ವಿಚಾರವಿತ್ತು. ಈ ವರ್ಣಚೌಕಟ್ಟನ್ನು ತುಂಡರಿಸಿ ಮನುಷ್ಯರೆಲ್ಲಾ ಒಂದೇ ಎಂಬ ಭಾವವನ್ನು ಬಸವಾದಿ ಶರಣರು ಗಟ್ಟಿಗೊಳಿಸಿದರು. ವರ್ಣಭೇದ, ವರ್ಗಭೇದ, ಲಿಂಗಭೇದಗಳನ್ನು ತೊಡೆದುಹಾಕುವಲ್ಲಿ ಶರಣರು ಸಾಕಷ್ಟು ಪ್ರಯತ್ನಪಟ್ಟರು.

ಈ ಸಂದರ್ಭದಲ್ಲಿ ಸಾವಿರಾರು ಮಹಿಳೆಯರು ಬೆಳಕಿಗೆ ಬಂದರು. ತಮಗೆ ದೊರೆತ ಅವಕಾಶದಲ್ಲಿ ಅಕ್ಷರಸ್ಥರಾದರು. ಅವರಲ್ಲಿ ಹಲವರು ವಚನಗಳನ್ನು ಬರೆದರು. ಈ ಪ್ರಕ್ರಿಯೆಯಲ್ಲಿ ನಿರ್ಭೀತಿಯಿಂದ ವೈಯಕ್ತಿಕ ದುಡಿಮೆಯ ಅನುಭವ ವ್ರತಾಚಾರ ನಿಷ್ಠೆಯ ಬಗ್ಗೆ ವಿಚಾರಗಳನ್ನು ವ್ಯಕ್ತಪಡಿಸಿದರು. ಇಂಥವರಲ್ಲಿ ಅಂತ್ಯದ ನೆಲೆಯಿಂದ ಬಂದ ಕಾಳವ್ವೆ, ಕಾಲಕುಣ್ಣಿಯ ಕಾಮಮ್ಮ ಅಲ್ಲದೆ ರೇಚವ್ವೆ – ವೀರಮ್ಮ, ಸತ್ಯಕ್ಕ, ಕದಿರ ರೆಮ್ಮವ್ವೆ, ಸೂಳೆಸಂಕವ್ವೆ, ಮಸಣರು ಮುಂತಾದವರು ಉಲ್ಲೇಖಾರ್ಹರಾಗಿದ್ದಾರೆ.

ಶರಣ ಧರ್ಮದಲ್ಲಿ ಸಂಸಾರ ತ್ಯಾಜ್ಯವಲ್ಲ ಅಲ್ಲದೆ ಅದು ಸಾಧನೆ ಮತ್ತು ಸಿದ್ಧಿಗಳಿಗೆ ಆತಂಕಕಾರಿಯಲ್ಲ; ಪ್ರತಿಯಾಗಿ ಅವುಗಳಿಗೆ ಪ್ರೇರಕ ಮತ್ತು ಪೂರಕ. ಈ ಕಾರಣದಿಂದ ದಾಂಪತ್ಯಧರ್ಮವೇ ಶ್ರೇಷ್ಠವೆಂದು ಸಾರಿದ ಶರಣರು ತಾವು ಸಂಸಾರಿಗಳಾಗಿ ಆದರ್ಶ ದಾಂಪತ್ಯ ಜೀವನ ನಡೆಸಿದ

ಸತಿಪತಿಗಳಿಬ್ಬರೂ ಸಿದ್ಧಿಯ ಶಿಖರವನ್ನೇರಿ ನಿಂತು ಲಿಂಗಾಂಗ ಸಾಮರಸ್ಯ ಸಾಧಿಸಿದರು. ಶರಣ ದಾಂಪತ್ಯ ಕೇವಲ ಲೌಕಿಕ ಮಟ್ಟದಲ್ಲಿ ನಿಲ್ಲದೆ ಅದು ಆಧ್ಯಾತ್ಮಿಕ ಹಂತಕ್ಕೂ ಏರಿ ನಡೆಯುತ್ತದೆ ಎಂಬುದಕ್ಕೆ ಶರಣೆ ಲಿಂಗಮ್ಮ ಹಾಗೂ ಶರಣ ಅಪ್ಪಣ್ಣರಸರ ಜೀವನ, ಮಾದರಿಯಾಗಿದೆ. ಆ ಹಂತದಲ್ಲಿ ನಾವು ಸತಿ-ಪತಿಗಳೆಂಬ ಭಾವ ಸಂಪೂರ್ಣವಾಗಿ ಇಲ್ಲವಾಗಿ ಶರಣಸತಿ ಲಿಂಗಪತಿ ಭಾವ ಅವರಲ್ಲಿ ಅಳವಡುತ್ತದೆ.

ಈ ಹಂತವನ್ನೇರಿದವರು ಶರಣ ದಂಪತಿಗಳಾದ ಲಿಂಗಮ್ಮ, ಅಪ್ಪಣ್ಣನವರು ಪುರುಷರ ಬಾಳಿಗೆ ಕಣ್ಣಾದ ಲಿಂಗಮ್ಮ ಪುರುಷನ ಸ್ಫೂರ್ತಿಯ ನೆಲೆಯಾಗಿ ಮೂಡಿ ನಿಂತಳು. ಸಾಮಾನ್ಯ ಸ್ತರದಿಂದ ಬಂದಲಿಂಗಮ್ಮ ಸಾಧಿಸಿದ ಈ ಆಧ್ಯಾತ್ಮ ಸಾಧನೆ, ದಾಂಪತ್ಯ ಸಿದ್ಧಿ ಎಲ್ಲರನ್ನು ವಿಸ್ಮಯಗೊಳಿಸು-ವಂತಹದ್ದಾಗಿದೆ ಎಂದು ಹೇಳಬಹುದು.

## II. ಧಾರ್ಮಿಕ ನಿಲುವು:

ಬಹುಪಾಲು ಶರಣೆಯರು ದಾಂಪತ್ಯಜೀವನವನ್ನು ಒಪ್ಪಿ ನಡೆದವರು. ಆಧ್ಯಾತ್ಮಿಕ ಸಾಧನೆಗೆ ಸಂಸಾರ ಪೂರಕ ಎಂಬ ಸತ್ಯವನ್ನು ಬದುಕಿ ತೋರಿದವರು. ಪುರುಷನ ಆಚಾರದಲ್ಲಿ ಸತಿ-ನಡೆಯಬೇಕಲ್ಲದೆ ಸತಿಗೆ ಸ್ವಾತಂತ್ರ್ಯ ಉಂಟೇ ಎಂದು ಪ್ರಶ್ನಿಸುವ ಅಕ್ಕಮ್ಮ ಎಂಬ ಶರಣೆ ಸತಿಪತಿಗಳ ಆಚಾರ-ವಿಚಾರಗಳಲ್ಲಿ ಸಹಮತವಿರಬೇಕು. ಆಯ್ದಕ್ಕಿ ಲಕ್ಕಮ್ಮನಂತಹ ಶಿವಶರಣೆಯು 'ದಾಂಪತ್ಯದಲ್ಲಿ ನಾಮವಿಲ್ಲದೆ ಅರಿವಿಂಗೆ ಬೇರೊಂದುಡಲುಂಟೇ' ಎಂದು ಲೌಕಿಕದಲ್ಲಿ ಗಂಡು-ಹೆಣ್ಣು ಭೇದ ಅನಿವಾರ್ಯ, ಆದರೆ ಜ್ಞಾನಕ್ಕೆ ಈ ಭೇದ ಅನಗತ್ಯ ಎಂದು ಅರಿವೆಂಬ ಗುರುವಿನ ಮಾರ್ಗದರ್ಶನದಲ್ಲಿ ಸಮನ್ವಯತೆಯ ಧೋರಣೆ ಹೊಂದಿದ್ದಾಳೆ. 'ಪತಿಕಾಯಕನಿಂದಿತ್ತು ಹೋಗಯ್ಯ, ಎನ್ನಾಳ್ದನೇ' ಎಂದು ಪತಿಗೆ ಕರ್ತವ್ಯ ನಿಷ್ಠೆಯನ್ನು ಎಚ್ಚರಿಸಿದಳು. ಹೀಗೆ ಪತಿಗೆ ವೈಚಾರಿಕ ಸಂಗಾತಿಯಾಗಿ ಬದುಕಿನ ಆದರ್ಶಕ್ಕೆ ಅರ್ಪಿಸಿಕೊಂಡ ಶರಣೆಯರು ಸಮಾನತೆಯ ಛಲದಿಂದ ಬೆಳೆದು ನಿಂತರು. ದಾಂಪತ್ಯದ ನ್ಯೂನ್ಯತೆಗಳನ್ನು ಸರಿಪಡಿಸಿಕೊಂಡು 'ಏಕಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತು' ಎಂಬ ಅಲ್ಲಮಪ್ರಭುಗಳ ಸತ್ಯ, ಆದರ್ಶಗಳ ನೆಲೆಯಲ್ಲಿ ಬಾಳಿದರು.

ಸ್ತ್ರೀಯರಿಗೆ, ಸ್ವಾತಂತ್ರ್ಯ ಸಮಾನತೆ, ಗೌರವ ದೊರೆತ ಫಲವಾಗಿ ಅಕ್ಕಮಹಾದೇವಿ, ನೀಲಲೋಚನೆ, ಮುಕ್ತಾಯಕ್ಕ ಮುಂತಾದ ಶರಣೆಯರು ಜ್ಞಾನಾರ್ಜನೆ ಪಡೆದರು. ವಚನಗಳನ್ನು ರಚಿಸಿದರು. ಆಧ್ಯಾತ್ಮ ಪ್ರಪಂಚದ ಅದ್ವಿತೀಯ ಮಹಿಳೆ ಮುಕ್ತಾಯಕ್ಕ ತಾರ್ಕಿಕ ಪ್ರತಿಭೆ ಹೊಂದಿದ ಶರಣೆ ತನ್ನ ಅಣ್ಣ ಅಜಗಣ್ಣನ ಸಾವಿನಿಂದ ದುಃಖಿತಳಾಗಿದ್ದಾಗ ಅಲ್ಲಮಪ್ರಭು ಸಾಂತ್ವನ ಹೇಳಬಂದಾಗ ಅವರೊಡನೆ ಚರ್ಚೆ ನಡೆಸಿದರು.

ಅವರನ್ನು ಒರೆಗೆ ಹಚ್ಚದೆ ಗುರುವೆಂದು ಒಪ್ಪಿಕೊಳ್ಳಲಿಲ್ಲ ನಡೆದು ನೆಡೆಯ ಕಡೆಯ ಕಂಡವರು ನುಡಿದು-ನುಡಿದು ಹೇಳುತ್ತಿರೆ ಇದಿರ ಗೆಲಬೇಕೆಂದು ನುಡಿದುಕೊಂಡಡೇನು' ಎಂದಿದ್ದಾಳೆ.

ಬ್ರಾಹ್ಮಣ ಧರ್ಮವು ಒಡೆಯ ವರ್ಗದ ವಿರುದ್ಧ ಪ್ರತನಿಷ್ಠೆಯ ಮೂಲಕ ಹೂಡಿದ ಬಂಡಾಯವಾಗಿದೆ ಎನ್ನಲಡ್ಡಿಯಿಲ್ಲ. ಕದಿರ ಕಾಯಕದ ರೆಮ್ಮವ್ವೆ 'ನಾ, ತಿರುಹುವ ರಾಟೆಯ ಕುಲಜಾತಿಯ ಹೇಳಿರಣ್ಣಾ' ಎಂದು, ಕಾಯಕದಲ್ಲಿ ನಿರತರಾದವರಿಗೆ ಜಾತಿಗಳ ಹಂಗಿಲ್ಲ ಎಂದು ಆಕೆ ಕೇಳುವ ಪ್ರಶ್ನೆಗೆ ಬಹುಶಃ ಇಂದೂ ಉತ್ತರ ದೊರೆಯಲಾರದೇನೋ ಕೀಳುಕುಲದಲ್ಲಿ ಹುಟ್ಟಿ ಬಂದ ಲಿಂಗಮ್ಮ ತನ್ನಕುಲದ ಸೂತಕವನ್ನು ಶರಣರ ಸಂಗದಿಂದ ಕಳೆದುಕೊಂಡೆ ಎಂಬ ವಿಶ್ವಾಸ ಹೊಂದಿದ್ದಾಳೆ.

"ಕನಿಷ್ಟದಲ್ಲಿ ಹುಟ್ಟದೆ ಉತ್ತಮರಲ್ಲಿ ಬೆಳೆದೆ
ಸತ್ಯವಂತರ ಪಾದವಿಡಿದೆ ಆ ಶರಣರ ಪಾದವಿಡಿದು
ಗುರುವ ಕಂಡೆ, ಲಿಂಗವ ಕಂಡೆ, ಜಂಗಮವ ಕಂಡೆ
ಪಾದೋಕವ ಕಂಡೆ, ಪ್ರಸಾದವ ಕಂಡೆ ಇಂತಿವರ ಕಂಡೆ
ನಾ ಕಂಗಳ ಮುಂದಣ ಕತ್ತಲ ಹರಿಯಲೊಡನೆ
ಮಂಗಳದ ಮಹಾ ಬೆಳಗಾನೋಲಾಡಿ ಸುಖಿಯಾದೆನಯ್ಯಾ" ಎಂದು

(ಶರಣ-ಶರಣೆಯರ ಜೀವನ ಚರಿತ್ರೆ, ವಿವಿಧ ಲೇಖಕರು, ಪು. ೧೨೩)

ಸಂತಸಪಟ್ಟಿದ್ದಾಳೆ. ಹೀಗೆ ದಲಿತ ಸ್ತ್ರೀಯೊಬ್ಬಳು ಕತ್ತಲೆಯಿಂದ ಬೆಳಕಿನೆಡೆಗೆ ಸಾಮಾನ್ಯತೆಯಿಂದ ಅಸಮಾನತೆಯ ಕಡೆಗೆ ಸಾಗಿದ ಪರಿಯನ್ನು ಅರಿತು ಅನುಭವಿಸಿ ಹೇಳುವಷ್ಟು ಪರಿವರ್ತನೆ ನಡೆದಿರುವುದು ಇತಿಹಾಸದಲ್ಲೇ ವಿಸ್ಮಯಕಾರಿ ವಿಚಾರವೆನ್ನಬಹುದು. ಕೆಳವರ್ಗದ ಸ್ತ್ರೀಯರ ಆತಂಕಗಳು ಅಳಲುಗಳು ವರ್ಣಾಶ್ರಮದ ಜಾತಿಬೇಧ, ನೀತಿಗೆ ಸವಾಲು ಹಾಕುವಂತಿದೆ.

'ಜಾತಿಗಳೇ ನೀವೇಕೆ ಕೀಳಾದಿರೋ' ಎಂದು ಕೇಳುವ ಕಾಳವ್ವೆ ಭಕ್ತರ ಕುಲವನ್ನೆತ್ತಿ ನಿಂದಿಸುವಾತ ಭಕ್ತನೇ ಎಂದು ಭಕ್ತನಾಗಿಯೂ ಜಾತಿ ಕುಲದ ಬಗ್ಗೆ ಮಾತನಾಡುವ ವ್ಯಕ್ತಿಯ ಯೋಗ್ಯತೆಯನ್ನು ಪ್ರಶ್ನಿಸಿದ್ದಾಳೆ. ವೈದಿಕ ಶಾಹಿಯ ಮೌಲ್ಯ ವ್ಯವಸ್ಥೆಯನ್ನು ಪ್ರಶ್ನಿಸುವ ದಿಟ್ಟತನ ಕುಲದ ಬಗ್ಗೆ ತನ್ನ ಅನುಭವದ ಹಿನ್ನೆಲೆಯಲ್ಲಿ "ಕುರಿ, ಕೋಳಿ, ಕರಿಮೀನು ತಿಂಬುವವರಿಗೆಲ್ಲಾ ಕುಲಜ- ಕುಲಕುಲಜರೆಂಬುದು ಅವರೆಂತು-ಕುಲಜರು?" ಎಂದು ಪ್ರಶ್ನಿಸಿ 'ಶಿವಗೆ ಪಂಚಾಮೃತ ಕರೆವ ಪಶುವನೆಂಬ ಮಾದಿಗ ಕೀಳು ಜಾತಿಯೆಂಬರು ಅವರೆಂತು ಕೀಳು ಜಾತಿಯಾದಾರು' ಎಂದು ಕೋಪದಿಂದ ಕೇಳಿದ್ದಾರೆ. ಕಾಳವ್ವೆಯ ವಚನಗಳಲ್ಲಿ ವಾಸ್ತವ ಬದುಕಿನ ಸಮಸ್ಯೆಗಳಿಗೆ ಸ್ಪಂದಿಸಿ ಪ್ರತಿಭಟಿಸಿರುವ ನೋವಿನ ದನಿಯಿದೆ. ಸಾಮಾನ್ಯ ವರ್ಗದ ಮಹಿಳೆ ಸಮಾಜದ

ಜಾತಿಭೇದ ನೀತಿಯನ್ನು ವಿರೋಧಿಸುವಷ್ಟು ವಿಚಾರವಂತಿಕೆ ಪಡೆದದ್ದು ವಚನಕಾರರು ನೀಡಿದ ಸಮಾನತೆಯ ಫಲವಾದ ಮೈಲಿಗಲ್ಲು.

ಅಸ್ಪೃಶ್ಯರೆನಿಸಿದ ಕಾಳವ್ವೆ ಮತ್ತು ಆಕೆಯ ಗಂಡ ಉರಿಲಿಂಗ ಪೆದ್ದಿ ಮೇಲ್ಜಾತಿಯವರ ತುಳಿತಕ್ಕೆ ಒಳಗಾದವರು. ತಮ್ಮ ತೀವ್ರ ಅಸಮಾಧಾನ ತಡೆಯಲಾರದ ದ್ವೇಷ ಅವರ ವಚನಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಕಾಳವ್ವೆಯ ಕೆಲವು ವಚನಗಳಲ್ಲಿ ಜಾತಿವ್ಯವಸ್ಥೆ ಬಗ್ಗೆ ಪ್ರತಿಭಟನೆ ಕಾಣಿಸುತ್ತದೆ. ಮಾದಿಗರ ಜಾತಿ ಕೀಳು ಎಂದು ಕರೆಯುವುದನ್ನು ಅವಳು ಖಂಡಿಸುತ್ತಾಳೆ.

“ಕುರಿಕೋಳಿ ಕಿರಿಮೀನು ತಿಂಬವರಿಗೆಲ್ಲ ಕುಲಜ–ಕುಲಜರೆಂದೆಂಬರು
ಶಿವಗೆ ಪಂಚಾಮೃತ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು
ಅವರೆಂತು ಕೀಳುಜಾತಿಯಾದರು? ಜಾತಿಗಳು ನೀವೇಕೆ ಕೀಳಾಗಿರೊ
ಬ್ರಾಹ್ಮಣನುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು
ಅದೆಂತೆಂದಡೆ;ಸಿದ್ದಲಿಕೆಯಾಯಿತು, ಸಗ್ಗಳೆಯಾಯಿತು
ಸಿದ್ದಲಿಕೆ ತುಪ್ಪವನು, ಸಗ್ಗಳೆಯ ನೀರನು
ಶುದ್ದವೆಂದು ಕುಡಿದ ಬುದ್ದಗೇಡಿ ವಿಪ್ರರಿಗೆ ನಾಯಕ–ನರಕ
ತಪ್ಪದಯ್ಯ ಉರಿಲಿಂಗ ಪೆದ್ದಿಗಳರಸು ಒಲ್ಲನವ್ವಾ”

(ಶರಣ–ಶರಣೆಯರ ಜೀವರ ಚರಿತ್ರೆ, ವಿವಿಧ ಲೇಖಕರು, ಪು. ೮೯)

ಕುರಿ, ಕೋಳಿ, ಮೀನು ತಿನ್ನುವ ಕುಲಜರನ್ನೆಲ್ಲಾ ತರಾಟೆಗೆ ತೆಗೆದುಕೊಂಡ ಕಾಳವ್ವೆ ಜಾತಿ ವ್ಯವಸ್ಥೆಯನ್ನು ಬಲವಾಗಿ ಖಂಡಿಸಿದ್ದಾಳೆ. ಕೀಳುಜಾತಿಯೆಂದು ಉಪಜೀವನಕ್ಕಾಗಿ ಯಾವುದಾದರೊಂದು ಶುದ್ಧ ಸತ್ಯ ಕಾಯಕವನ್ನು ಕೈಗೊಳ್ಳಬೇಕಾಗುತ್ತದೆ.

ಬಸವಾದಿ ಶರಣರ ಕಾಲದಲ್ಲಿ ಜೀವನೋಪಾಯಕ್ಕಾಗಿ, ದಾಸೋಹಕ್ಕಾಗಿ ತಮ್ಮ ಒಲುಮೆಯ ಕಾಯಕಗಳನ್ನು ಕೈಗೊಂಡ ಬಗ್ಗೆ ತಿಳಿದುಬರುತ್ತದೆ. ಕಾಯಕಗಳಲ್ಲಿ ಹಿರಿದು–ಕಿರಿದೆಂಬ ತಾರತಮ್ಯವಿಲ್ಲ. ಅದಕ್ಕಾಗಿ ಶರಣರನ್ನು ಅವರವರ ಕಾಯಕಗಳ ಆಧಾರದ ಮೇಲೆ ಹೆಸರಿಸಲಾಗಿದೆ, ಗುರುತಿಸಲಾಗಿದೆ. ಅವರುಗಳೆಂದರೆ– ಜೇಡರ ದಾಸಿಮಯ್ಯ, ನುಲಿಯಚಂದ್ರಯ್ಯ, ಡೋಹರ ಕಕ್ಕಯ್ಯ, ಮಾದಾರಚೆನ್ನಯ್ಯ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ, ಆಯ್ದಕ್ಕಿಲಕ್ಕಮ್ಮ, ಮೊಳಿಗೆಯ ಮಹಾದೇವಿ, ಮಡಿವಾಳ ಮಾಚಿದೇವ ಮುಂತಾದ ಶರಣ–ಶರಣೆಯರನ್ನು ಅವರ ಕಾಯಕದ ಆಧಾರದಿಂದ ಗುರುತಿಸಲಾಗಿದೆ.

ಮಾನವ ಮಹಾದೇವನಾಗಲು ಸತ್ಯ ಶುದ್ಧ ಕಾಯಕದೊಂದಿಗೆ ನಿತ್ಯ, ದಾಸೋಹ, ಇಷ್ಟ ಲಿಂಗಾರ್ಚನೆ, ಮುಖ್ಯವೆಂಬ ಮಾತನ್ನು ಶರಣರು ಮನಗಂಡಿದ್ದರು.

ಉಪಜೀವನಕ್ಕಾಗಿ ಕೈಗೊಂಡ ಕಾಯಕಗಳು ಜಾತಿಗಳಲ್ಲ, ಕಾಯಕದಿಂದ ಜೀವಿಸುವವರು ಕೀಳಲ್ಲ, ಪರರ ದುಡಿಮೆಯ ಮೇಲೆ ಜೀವಿಸುವ ಪರಪುಟ್ಟ ಜೀವಗಳಲ್ಲಿ ಶರಣರು

"ನಿತ್ಯ ಕಾಯಕವಿಲ್ಲದವರು ಭಕ್ತರಲ್ಲ
ಸತ್ಯ ಶುದ್ಧವಿಲ್ಲದದು ಕಾಯಕವಲ್ಲ
ಆಸೆಯೆಂಬುದ ಭವದ ಬೀಜ
ನಿರಾಸೆಯೆಂಬುದು ನಿತ್ಯ ಮುಕ್ತಿ
ಉರಿಲಿಂಗ ಪೆದ್ದಗಳರಸನಲ್ಲಿ ಸದರವಿಲ್ಲ ಕಾಣವ್ವ"

(ಶರಣ-ಶರಣೆಯರ ಜೀವನಚರಿತ್ರೆ, ವಿವಿಧ ಲೇಖಕರು, ಪು. ೧೧೪)

ಹನ್ನೆರಡನೇ ಶತಮಾನದಲ್ಲಿ ಶಿವಶರಣೆಯರು ಕಾಯಕ ತತ್ವಕ್ಕೆ ಎಷ್ಟು ಮಹತ್ವ ನೀಡುತ್ತಿದ್ದರು ಎಂಬುದನ್ನು ಈ ವಚನ ತಿಳಿಸಿಕೊಡುತ್ತದೆ. ಅಲ್ಲದೆ ಪ್ರತಿನಿತ್ಯ ಕೆಲಸಕಾರ್ಯ ಮಾಡದವರು ಶಿವಭಕ್ತರೇ ಅಲ್ಲ. ಅದರಲ್ಲಿಯೂ ಸತ್ಯದಿಂದ ಕೂಡಿದ ಶುದ್ಧತೆಯಿಂದ ಕೂಡಿದ ಕಾಯಕವನ್ನೇ ಮಾಡಬೇಕೆಂಬ ಕಟ್ಟುನಿಟ್ಟಿನ ನಿಯಮವಾಗಿತ್ತು ಎಂಬುದೇ ಇಲ್ಲಿನ ವಿಶೇಷವಾಗಿದೆ.

"ವ್ರತವೆಂಬುದು ನಾಯಕ ರತ್ನ ವ್ರತವೆಂಬುದು
ಸುಪ್ಪಾಣಿಯ ಮುತ್ತು ವ್ರತವೆಂಬುದು ಜೀವಕಳೆ
ವ್ರತವೆಂಬುದು ಸುಯಿದಾನ- ವ್ರತ ತಪ್ಪಲು-ಉರಿಲಿಂಗ
ಪೆದ್ದಿಗಳರಸ ನೊಲ್ಲನವ್ವಾ"

(ಶರಣ-ಶರಣೆಯರ ಜೀವನಚರಿತ್ರೆ, ವಿವಿಧ ಲೇಖಕರು, ಪು. ೯೦)

ಹೀಗೆ ಭಕ್ತನ ಲಕ್ಷಣ ವ್ರತಾಚರಣೆಯ ಮಹತ್ವ, ಪ್ರಸಾದದ ಮಹಿಮೆ, ಕಾಯಕನಿಷ್ಠೆ, ಉಗ್ರಪ್ರತಿಭಟನೆ, ಇವು ಈಕೆಯ ವಚನಗಳಲ್ಲಿ ಕಂಡುಬರುವ ಮುಖ್ಯಾಂಶಗಳು. ಕಾಳವ್ವೆ ಅಸ್ಪೃಶ್ಯಳಾಗಿ ಹುಟ್ಟಿ, ಕಳ್ಳನ ಕೈಹಿಡಿದು ಜೀವನ ನಡೆಸಿ, ಗುರುವಿನ ಕೃಪೆಯಿಂದ ಸಾರ್ಥಕ ಜೀವನ ನಡೆಸಿ ಇತರರಿಗೆ ಮಾದರಿಯಾಗಿದ್ದಾಳೆ.

## ೬. ಉಪಸಂಹಾರ

ವಿಶ್ವಸಾಹಿತ್ಯಕ್ಕೆ ಕನ್ನಡ ಸಾಹಿತ್ಯದ ವಿಶೇಷ ಕೊಡುಗೆ ಎಂದರೆ ಅದು ವಚನಸಾಹಿತ್ಯ ಎಂದು ಹೇಳಬಹುದು. ಇಂತಹ ಒಂದು ಶ್ರೇಷ್ಠ ಸಾಹಿಕ್ಯವನ್ನು ಆಧುನಿಕ ಯುಗದಲ್ಲೂ ಮುಂದುವರೆಸಿಕೊಂಡು ಹೋಗಿರುವ ಕೀರ್ತಿ ಆಧುನಿಕ ವಚನಕಾರ್ತಿಯರಿಗೆ ಸಲ್ಲುತ್ತದೆ. ವಚನ ಸಾಹಿತ್ಯ ಕನ್ನಡ ಸಾಹಿತ್ಯದ ಅವಿಭಾಜ್ಯ ಅಂಗವಾಗಿರುವುದರಿಂದ ಆಧುನಿಕ ವಚನಸಾಹಿತ್ಯದ ಅಧ್ಯಯನ ತುಂಬಾ ಮಹತ್ವದ್ದೆನಿಸಿದೆ. ಇಂಥ ಶ್ರೇಷ್ಠ ಸಾಹಿತ್ಯವನ್ನು ಆಧುನಿಕ ಜಗತ್ತಿಗೆ ಅನುಗುಣವಾಗಿ ಆಧುನಿಕ ಸಮಾಜದ ಅಗತ್ಯಕ್ಕನುಗುಣವಾಗಿ ಮತ್ತು ಆಧುನಿಕ ಸಮಾಜದ ಸವಾಲುಗಳನ್ನು ಮತ್ತು ಸಮಸ್ಯೆಗಳನ್ನು ಕೇಂದ್ರವಾಗಿಟ್ಟುಕೊಂಡು ವೈವಿಧ್ಯಮಯವಾದ ಹಾಗೂ ವೈಶಿಷ್ಟ್ಯತೆಗಳಿಂದ ಕೂಡಿದ ಶ್ರೇಷ್ಠ ವಚನ ಸಾಹಿತ್ಯವಾಗಿದೆ.

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರ ಕಾಲದಲ್ಲಿ ಕಂಡುಬರುವ ಸಾಮಾಜಿಕ ಸಮಸ್ಯೆಗಳನ್ನು ಆಧಾರವಾಗಿಟ್ಟುಕೊಂಡು ವಚನಸಾಹಿತ್ಯವನ್ನು ರಚಿಸಿದರೂ ಆಧುನಿಕ ಸಮಾಜದ ಪ್ರಚಲಿತ ವಿದ್ಯಮಾನಗಳನ್ನು ಹಾಗೂ ಪ್ರಚಲಿತ ಸವಾಲುಗಳನ್ನು ಸಮಸ್ಯೆಗಳನ್ನು ಎಳೆ ಎಳೆಯಾಗಿ ವಿವರಿಸಲಾಗಿದೆ. ಆಧುನಿಕ ಸಮಾಜದ ಕುಂದುಕೊರತೆಗಳನ್ನು ನೋವುನಲಿವುಗಳನ್ನು ಅನುಸರಿಸಿಯೇ ವಚನ ಸಾಹಿತ್ಯ ಕೃಷಿ ಮಾಡಿದ್ದಾರೆ.

ಹನ್ನೆರಡನೇ ಶತಮಾನದಲ್ಲಿದ್ದಂತಹ ಪ್ರಮುಖ ವಚನಕಾರರಾದ ದೇವರದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಮುಕ್ತಾಯಕ್ಕ, ಸಿದ್ದರಾಮ, ಅಂಬಿಗರ ಚೌಡಯ್ಯ, ಆಯ್ದಕ್ಕಿ ಲಕ್ಕಮ್ಮ ಮುಂತಾದ ವಚನಕಾರರ ಪ್ರಭಾವ ಮತ್ತು ಪ್ರೇರಣೆಯಿಂದ ಸಾಹಿತ್ಯ ರಚನೆ ಮಾಡಿದ್ದರೂ ಸಹ ಆಧುನಿಕ ವಚನಕಾರ್ತಿಯರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಸಾಹಿತ್ಯ ಕೃಷಿ ಮಾಡಿ ಕನ್ನಡ ವಚನ ಸಾಹಿತ್ಯ ಪರಂಪರೆಯನ್ನು ಹಾಗೂ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ.

ಭಾರತೀಯ ಸಮಾಜದಲ್ಲಿ ಅನಾದಿಕಾಲದಿಂದಲೂ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಅನೇಕ ಗೊಡ್ಡು ಸಂಪ್ರದಾಯಗಳು ಕೆಟ್ಟ ಆಚರಣೆಗಳು ಸ್ತ್ರೀ ಶೋಷಣೆ, ಬಾಲ್ಯವಿವಾಹ, ವರದಕ್ಷಿಣೆ, ಅನಕ್ಷರತೆ, ಸತಿಸಹಗಮನ ಪದ್ಧತಿ, ಅತ್ಯಾಚಾರ, ಅನಾಚಾರ, ವೇಶ್ಯವಾಟಿಕೆ ದೇವದಾಸಿ ಪದ್ಧತಿ ಅಜ್ಞಾನ, ಅಂಧಕಾರ, ಹೆಣ್ಣು ಭ್ರೂಣಹತ್ಯೆ, ಭ್ರಷ್ಟಾಚಾರ, ಸ್ವಾರ್ಥರಾಜಕೀಯ ಮುಂತಾದ ಅನಿಷ್ಟ ಪದ್ಧತಿಗಳ ವಿರುದ್ಧ ತೀವ್ರವಾದ

ಹೋರಾಟ, ಪ್ರತಿಭಟನೆ ಮಾಡುವುದರ ಮೂಲಕ ಜನರಲ್ಲಿ ಜಾಗೃತಿಯನ್ನುಂಟುಮಾಡಿದರು ಹಾಗೂ ಹಿಂದೂ ಸಮಾಜಕ್ಕೆ ಅಂಟಿದ್ದ ಕಳಂಕವನ್ನು ದೂರಮಾಡಿದರು.

ಸಮಾಜವನ್ನು ಸೋಸುವ ಸಮಾಜವನ್ನು ಶುದ್ಧೀಕರಿಸುವ, ಸ್ವಚ್ಛಗೊಳಿಸುವ ಮೂಲಕ ಶಾಂತಿ-ಸುಖೀ ಮತ್ತು ಆದರ್ಶ ಸಮಾಜದ ಸ್ಥಾಪನೆಗೆ ಕಾರಣರಾಗಿದ್ದಾರೆ. ಅಲ್ಲದೆ ರಾಮರಾಜ್ಯದ ಕನಸನ್ನು ನನಸು ಮಾಡುವ ಮಹತ್ವಾಕಾಂಕ್ಷೆಯನ್ನು ಹೊಂದಿದವರಾಗಿದ್ದಾರೆ.

ಆಧುನಿಕ ಸಮಾಜದಲ್ಲಿ ಸ್ತ್ರೀಯರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ದೌರ್ಜನ್ಯ, ಅನ್ಯಾಯ, ಅಕ್ರಮ, ಶೋಷಣೆ, ಲೈಂಗಿಕ ಕಿರುಕುಳ, ಅತ್ಯಾಚಾರ ಹಾಗೂ ಕಾನೂನು ಬಾಹಿರ, ಸಮಾಜ ಬಾಹಿರ ದುಷ್ಕೃತ್ಯಗಳು ಇಂದಿಗೂ ವ್ಯಕ್ತಪಡಿಸಿದ್ದಾರೆ. ಅಲ್ಲದೆ ಇನ್ನು ಮುಂದಿನ ದಿನಗಳಲ್ಲಾದರೂ ಇವುಗಳಿಗೆ ಕಡಿವಾಣ ಹಾಕಬೇಕೆಂದು ಒಕ್ಕೊರಲಿನಿಂದ ಆಗ್ರಹಿಸಿದ್ದಾರೆ.

ಆಧುನಿಕ ದಿನಗಳಲ್ಲಿ ಸ್ತ್ರೀಯರನ್ನು ತಮ್ಮ ಭೋಗದ ವಸ್ತುಗಳನ್ನಾಗಿ ಮಾಡಿಕೊಂಡಿರುವುದರ ಬಗ್ಗೆ ತೀವ್ರ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ ಅಲ್ಲದೆ ಸಮಾಜದ ಸ್ಥಿತಿಗತಿಗಳನ್ನು ಕುಂದುಕೊರತೆಗಳನ್ನು ಹಾಗೂ ಆಧುನಿಕ ಸಮಾಜದ ರೂಪುರೇಷೆಗಳನ್ನು ಅಂಕುಡೊಂಕುಗಳನ್ನು ನಿರ್ಭಯವಾಗಿ, ಪ್ರಾಮಾಣಿಕವಾಗಿ, ದಕ್ಷತೆಯಿಂದ ಸಮಾಜದ ಮುಂದಿಟ್ಟಿದ್ದಾರೆ.

ಆಧುನಿಕ ವಚನಸಾಹಿತ್ಯ ಬಸವಾದಿ ಶರಣರ ವಚನ ಸಾಹಿತ್ಯದಷ್ಟು ಶ್ರೇಷ್ಠ ಮಟ್ಟದಲ್ಲಿ ಇಲ್ಲದಿದ್ದರೂ ಒಂದು ಉತ್ತಮವಾದ ಸಮರ್ಥವಾದ ಸಾಹಿತ್ಯ ಎಂದು ಹೇಳಬಹುದು. ಅಲ್ಲದೆ ಅದು ಆಧುನಿಕ ಸಮಾಜದ ವಿವಿಧ ಮುಖಗಳನ್ನು ಮತ್ತು ಅದರ ಎಲ್ಲ ಆಯಾಮಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಆ ಮೂಲಕ ಅದು ಪ್ರಾಚೀನ ವಚನ ಸಾಹಿತ್ಯದಂತೆ ಸಾರ್ವಕಾಲಿಕ ಮೌಲ್ಯಗಳನ್ನು ಒಳಗೊಂಡಿದೆ ಹಾಗೂ ಸತ್ಯಾಂಶಗಳಿಂದ ಕೂಡಿದೆ.

ಪ್ರಾಚೀನ ವಚನಕಾರರಂತೆ ಆಧುನಿಕ ವಚನಕಾರ್ತಿಯರು ಸಹ ಸಾಮಾಜಿಕ ವಿಡಂಬನೆಗೆ ಹೆಚ್ಚು ಮಹತ್ವ ನೀಡಿ ಅದಕ್ಕಾಗಿಯೇ ತಮ್ಮ ಬಹುಪಾಲು ವಚನಗಳನ್ನು ಮೀಸಲಿಟ್ಟಿದ್ದಾರೆ. ಏಕೆಂದರೆ ಸಮಾಜವನ್ನು ತಿದ್ದುವುದು ಅದನ್ನು ಸರಿದಾರಿಗೆ ತರುವುದು, ಹಾಗೂ ಸಮಾಜ ಎದುರಿಸುತ್ತಿರುವ ಹಲವು ಸಮಸ್ಯೆಗಳಿಗೆ ಪರಿಹಾರಗಳನ್ನು, ನಿವಾರಣೋಪಾಯ ಸೂಚಿಸುವುದು ಅವರ ಮುಖ್ಯ ಜವಾಬ್ದಾರಿಯಾಗಿತ್ತು. ಈ ಹೊಣೆಗಾರಿಕೆಯನ್ನು ಬಹಳ ಶ್ರದ್ಧೆಯಿಂದ, ನಿಷ್ಠೆಯಿಂದ ನಿಭಾಯಿಸಿದ್ದಾರೆ. ಆ ಮೂಲಕ ಆಧುನಿಕ

ವಚನಕಾರ್ತಿಯರು ಜನರಲ್ಲಿ ವೈಜ್ಞಾನಿಕ ಹಾಗೂ ವೈಚಾರಿಕ ಮನೋಭಾವನೆ ಬೆಳೆಸುವಲ್ಲಿ ಸಫಲರಾದರು. ಆದ್ದರಿಂದ ಇವರನ್ನು ಸಮಾಜದ ವೈದ್ಯರು ಸಮಾಜದ ವಿಜ್ಞಾನಿಗಳೆಂದು ಕರೆಯಬಹುದು.

"ಆಡು ಮುಟ್ಟದ ಸೊಪ್ಪಿಲ್ಲ" ಎಂಬ ಗಾದೆ ಮಾತಿನಂತೆ ವಚನಕಾರ್ತಿಯರು ಸಾಮಾಜಿಕ, ಆರ್ಥಿಕ, ಧಾರ್ಮಿಕ, ನೈತಿಕ, ಆಧ್ಯಾತ್ಮಿಕ, ಶೈಕ್ಷಣಿಕ ಕ್ಷೇತ್ರ, ರಾಜಕೀಯ ಕ್ಷೇತ್ರ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ವಿಪುಲವಾಗಿ ವ್ಯಕ್ತಪಡಿಸಿದ್ದಾರೆ. ಸಿನಿಮಾಗಳಲ್ಲಿ ಮಹಿಳೆಯನ್ನು ನಡೆಸಿಕೊಳ್ಳುತ್ತಿರುವ ಬಗೆ ಹಾಗೂ ಅಶ್ಲೀಲ ಚಿತ್ರಗಳು ಹಾಗೂ ಸಾಹಿತ್ಯಗಳು,ಅಶ್ಲೀಲ ಚಲನಚಿತ್ರಗಳ ಬಿಡುಗಡೆ, ಕ್ಯಾಬರೆ, ಅರೆನಗ್ನ ಹಾಗೂ ಮಹಿಳೆಯರಿಗೆ ಹಣದ ಅಧಿಕಾರ, ಉದ್ಯೋಗದ ಆಸೆ–ಆಮಿಷಗಳನ್ನು ತೋರಿಸಿ ಅವರನ್ನು ವಂಚಿಸುವುದು ಮತ್ತು ದೇವರ ಹೆಸರಲ್ಲಿ ಧರ್ಮದ ಹೆಸರಿನಲ್ಲಿ ಆಚರಣೆಗಳ ಹೆಸರಿನಲ್ಲಿ ಮಹಿಳೆಯ ಮೇಲೆ ಆಗುವಂತಹ ಮೋಸ–ವಂಚನೆಗಳ ಬಗ್ಗೆ ಬೆಳಕು ಚೆಲ್ಲಲಾಗಿದೆ.

ಒಟ್ಟಿನಲ್ಲಿ ಸ್ತ್ರೀಯರಿಗೆ ಎಲ್ಲಾ ಕ್ಷೇತ್ರಗಳಲ್ಲಿ ಸೂಕ್ತವಾದ ಸ್ಥಾನಮಾನ, ಸೂಕ್ತ ಅವಕಾಶ ಹಾಗೂ ಗೌರವ ಆದ್ಯತೆಗಳನ್ನು ನೀಡಬೇಕು. ಆ ಮೂಲಕ ಮಹಿಳೆಯ ಬದುಕನ್ನು ಉತ್ತಮಪಡಿಸಬೇಕು, ಸ್ತ್ರೀಶೋಷಣೆ ನಿಲ್ಲಬೇಕು ಹೆಣ್ಣು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ, ಆಧ್ಯಾತ್ಮಿಕವಾಗಿ ಮತ್ತು ಧಾರ್ಮಿಕವಾಗಿ ಮುಂದುವರೆಯಲು ಸ್ವಾತಂತ್ರ್ಯ ಹಾಗೂ ಸಮಾನತೆಗಳ ಅಗತ್ಯವಿದೆ. ಆ ಮೂಲಕ ಅವಳ ಸರ್ವಾಂಗೀಣ, ಸರ್ವತೋಮುಖ ಅಭಿವೃದ್ಧಿಗೆ ಸಹಕಾರವಾಗಬೇಕೆಂಬ ಅಭಿಲಾಷೆಯನ್ನು ಆಧುನಿಕ ವಚನಕಾರ್ತಿಯರು ಹೊಂದಿದ್ದಾರೆ. ಸಮಾಜದಲ್ಲಿ ಹೆಣ್ಣು ಸವಾವಲಂಬಿಯಾಗಿ, ಆತ್ಮಗೌರವದಿಂದ ಬಾಳಿಬದುಕುವ ಅವಕಾಶಗಳು ಲಭ್ಯವಾಗಬೇಕೆಂದು ಆಗ್ರಹಿಸಿದ್ದಾರೆ. ಮಹಿಳೆಯರ, ಸ್ತ್ರೀಯರ ಅಭಿವೃದ್ಧಿಯಾಗದೇ ಸಮಾಜದ, ದೇಶದ ಅಭಿವೃದ್ಧಿ ಸಾಧ್ಯವಿಲ್ಲ ಎಂದಿದ್ದಾರೆ. ಸಮಾಜದ ಕೇಂದ್ರಬಿಂದುವಾದ ಹೆಣ್ಣಿನ ಬದುಕು ಹಸನಾಗಬೇಕೆಂಬ ಮಹದಾಸೆಯನ್ನು ಹೊಂದಿದ್ದಾರೆ.

# ಆಕರ ಗ್ರಂಥಗಳು


| ಕ್ರಮ ಸಂಖ್ಯೆ | ಲೇಖಕರ ಹೆಸರು : ಕೃತಿಯ ಹೆಸರು | ಮುದ್ರಣ ಪ್ರಕಾಶನ | ಪ್ರಕಟಣೆಗೊಂಡ ವರ್ಷ |
|---|---|---|---|
| ೧. | ಅನ್ನಪೂರ್ಣ : 'ಆನಂದಸಿಂಧು' | ಆನಂದ ಪ್ರಕಾಶನ, ೪೦೪, ೧೪ನೇ ಮೇನ್, ಸರಸ್ವತಿಪುರಂ ಮೈಸೂರು–೫೭೦ ೦೦೯ | ೨೦೦೦ |
| ೨. | ನೀಲಾಂಬಿಕಾ : 'ವಚನೋದ್ಭವ' | ಶ್ರೀ ಶಿವರಾತ್ರೀಶ್ವರ ಅಕ್ಕನ ಬಳಗ ಸುತ್ತೂರ ಮಠ, ಮೈಸೂರು | ೨೦೦೨ |
| ೩. | ಡಾ. ರತ್ನಮ್ಮ ಕೆ.ಎಸ್. : ವಚನಸಾಹಿತ್ಯ – ಸಂಚಯ | ಕಾವ್ಯಶ್ರೀ ಪ್ರಕಾಶನ ೨೮೮೪, ಕೋರ್ಟ್ ಹಿಂಭಾಗ, ಮೈಸೂರು – ೫೭೦ ೦೦೯ | ೨೦೦೧ |
| ೪. | ಡಾ. ರತ್ನಮ್ಮ ಕೆ.ಎಸ್. : ವಚನಸಾಹಿತ್ಯ – ಸಂಚಯ | ಶ್ರೀ ಗಾಯತ್ರಿ ಎಂಟರ್ ಪ್ರೈಸಸ್ ೨೮೫/ಎಫ್ ೬, ಉತ್ತರಾಧಿಮಠದ ರಸ್ತೆ, ೫ನೇ ರಸ್ತೆ ಪಶ್ಚಿಮ ಮೈಸೂರು–೪ | ೨೦೦೨ |
| ೫. | ಡಾ. ರತ್ನಮ್ಮ ಕೆ.ಎಸ್. : ಪ್ರಣವಜ್ಯೋತಿ (ಆಧುನಿಕ ವಚನಗಳು) | ಶ್ರೀಕ್ಷೇತ್ರ ಪ್ರಕಾಶನ ೨೮೭/ಎಫ್ – ೨೫ ರಾಮಾನುಜ ರಸ್ತೆ ಫೋರ್ಟ್ ಮೊಹಲ್ಲಾ ಮೈಸೂರು –೪ | ೨೦೦೪ |
| ೬. | ಶಾಂತಾ ಜಗದೀಶ್ : 'ಶಾಂತನುಡಿ' (ಆಧುನಿಕ ವಚನಗಳು) | ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ ಗೋಕುಲಂ, ೩ನೇ ಹಂತ, ಮೈಸೂರು | ೨೦೦೨ |

| | | | |
|---|---|---|---|
| ೭. | ಸರೋಜಮ್ಮ : 'ವಚನ ಸರಸಿ' ಬಸವ ಕಂದಳ ವಚನಗಳು | ವಿಶ್ವಕಲ್ಯಾಣ ಮಿಷನ್ ಚಾರಿಟಬಲ್ ಟ್ರಸ್ಟ್ ಬಸವಮಂಟಪ ೨೦೩೫, ೩೦ನೇ ಮೈನ್, ೨ನೇ ಬ್ಲಾಕ್ ರಾಜಾಜಿನಗರ, ಬೆಂಗಳೂರು | ೨೦೦೬ |
| ೮. | ಪ್ರೇಮಲೀಲಾ ಪ್ರೇಮಾಂಜಲಿ ಆಧುನಿಕ ವಚನಗಳು | ತ್ರಿವೇಣಿ ಪ್ರಕಾಶನ ೧೧೯೫ ಬಾಲಕೃಷ್ಣರಾವ್ ರಸ್ತೆ, ಚಾಮರಾಜಪುರಂ ಮೈಸೂರು-೫೭೦೦೦೫ | ೨೦೦೨ |

# ಗ್ರಂಥಋಣ


| ಕ್ರಮ ಸಂಖ್ಯೆ | ಲೇಖಕರ ಹೆಸರು : ಕೃತಿಯ ಹೆಸರು | ಮುದ್ರಣ ಪ್ರಕಾಶನ | ಪ್ರಕಟಣೆಗೊಂಡ ವರ್ಷ |
| --- | --- | --- | --- |
| ೧. | ಶ್ರೀ ಅಂಕಪ್ಪ : "ಶಿವನಿರುವುದೆಲ್ಲಿ" | ಎನ್.ಎಸ್.ಬಸವರಾಜು | ಪ್ರಥಮ ಮುದ್ರಣ |
| ೨. | ನೀಲಾಂಬಿಕಾ : "ಸ್ಪಂದನ" | ಭಾವಸಂಪದ ಪ್ರಕಾನ ೧೨೨೬/೧ ಕಾಂತರಾಜ್ ಅರಸ್ ರಸ್ತೆ, ಕೃಷ್ಣಮೂರ್ತಿಪುರಮ, ಮೈಸೂರು | ೧೯೯೬ |
| ೩. | ವಿವಿಧ ಲೇಖಕರು : 'ಶರಣ, ಶರಣೆಯ ಜೀವನ ಚರಿತ್ರೆ | ಶ್ರೀಮುರುಗ ರಾಜೇಂದ್ರ ಗ್ರಂಥಮಾಲೆ, ಬಸವ ಕೇಂದ್ರ, ಶ್ರೀ ಮುರುಗ ರಾಜೇಂದ್ರಮಠ, ಚಿತ್ರದುರ್ಗ | ೧೯೯೮ |
| ೪. | ಪ್ರೊ. ಕೆ.ಆರ್.ಪ್ರೇಮಲೀಲಾ : ಸಾಹಿತ್ಯಾಮೋದ ವಿಮರ್ಶ ಲೇಖನಗಳು | ಪ್ರೇಮಲೀಲಾ ಪ್ರಕಾಶನ ಹಂಸಧ್ವನಿ ೩೯. ಎ ೮ನೇ ಮೇನ್, ೫ನೇ ಕ್ರಾಸ್, ಕೆ.ಎಚ್.ರಸ್ತೆ, ಸರಸ್ವತಿಪುರಂ ಮೈಸೂರು –೯ | ಪ್ರಥಮ ಮುದ್ರಣ ೨೦೦೫ |

